## ಶರತ್ ಎಚ್.ಕೆ.

ಹುಟ್ಟಿದ್ದು ಹಾಸನದಲ್ಲಿ. ಓದಿದ್ದು ಹಾಸನದ ಮಲೆನಾಡು ಎಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ಹಾಗು ಎಂ.ಟೆಕ್. ಈಗ ಅದೇ ಕಾಲೇಜಿನಲ್ಲಿ ಸಹಾಯಕ ಪ್ರಾಧ್ಯಾಪಕನಾಗಿ ಕಾರ್ಯನಿರ್ವಹಣೆ. 'ಮೊದಲ ತೊದಲು' ಹಾಗು 'ಬೆಳಕಿನ ಬೇಲಿ' ಪ್ರಕಟಿತ ಕೃತಿಗಳು.

✉: hksharu@gmail.com

***Godegala Naduve-*** Collection of articles written by Sharath H.K.
***Published by*** Prajodaya Prakashana, Behind Sandal Koti,
K.R.Puram, Hassan, Karnataka-573201

ಪ್ರಕಟಣೆ: 2016

ಪುಟಗಳು: 65

ಬೆಲೆ: ₹ 30



ಮುಖಪುಟ ವಿನ್ಯಾಸ: ಶರತ್ ಎಚ್.ಕೆ.

**ಪ್ರಕಾಶಕರು**

ಪ್ರಜೋದಯ ಪ್ರಕಾಶನ

ಗಂಧದ ಕೋಠಿ ಹಿಂಭಾಗ, ಗೋಕುಲ್ ಹೋಟೆಲ್ ರಸ್ತೆ,

ಕೆ.ಆರ್.ಪುರಂ, ಹಾಸನ-573201

☎: 8792276742 ✉: prajodayaprakashana@gmail.com

**ಆನ್ ಲೈನ್ ಅಂಗಡಿ:**

www.payumoney.com/store/buy/prajodayaprakashana

## ಅರ್ಪಣೆ

ಬಯಲಲಿ ಬದುಕು ಕಟ್ಟಿಕೊಂಡವರಿಗೆ…

## ಲೇಖಕನ ಮಾತು

ವೈಯಕ್ತಿಕ ಅನುಭವಗಳ ಮೂಲಕ ಕಂಡುಕೊಂಡ ಸಂಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಸಾಮಾಜಿಕ ವಿದ್ಯಮಾನಗಳ ಕುರಿತು ನನ್ನ ಅಭಿಪ್ರಾಯವನ್ನು ಬರಹಗಳ ಮೂಲಕ ಅಭಿವ್ಯಕ್ತಿಸಲು ತೊಡಗಿ ಐದಾರು ವರ್ಷಗಳಾಗಿವೆ. ಮೆಚ್ಚುಗೆ ಹಾಗು ಟೀಕೆ ಎರಡನ್ನೂ ಸಮಚಿತ್ತದಿಂದ ಸ್ವೀಕರಿಸಲು ನನ್ನ ಮಿತಿಯಲ್ಲಿ ಪ್ರಯತ್ನಿಸುತ್ತಿದ್ದೇನೆ. ಇಲ್ಲಿನ ಬರಹಗಳಲ್ಲಿ ತಪ್ಪು ಅಂಶಗಳು ನುಸುಳಿದ್ದಲ್ಲಿ ನನ್ನ ಗಮನಕ್ಕೆ ತನ್ನಿ, ತಿದ್ದಿಕೊಳ್ಳುತ್ತೇನೆ. ಭಿನ್ನಾಭಿಪ್ರಾಯಗಳಿದ್ದಲ್ಲಿ ಹಂಚಿಕೊಳ್ಳಿ. ನನ್ನ ನಿಲುವು ಬದಲಾಗದೇ ಹೋದರೂ ಭಿನ್ನ ಧ್ವನಿಗಳಿಗೆ ಕಿವಿಗೊಡುವ ಸದವಕಾಶವಂತೂ ದೊರೆಯುತ್ತದೆ.

ಇಲ್ಲಿನ ಬರಹಗಳು ಪ್ರಜಾವಾಣಿ, ವಿಜಯವಾಣಿ, ಕನ್ನಡಪ್ರಭ, ಉದಯವಾಣಿ, ಗೌರಿ ಲಂಕೇಶ್ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನನ್ನ ಬರಹಗಳನ್ನು ಪ್ರಕಟಿಸುವ ಮೂಲಕ ಪ್ರೋತ್ಸಾಹಿಸುತ್ತಿರುವ ಪತ್ರಿಕೆಗಳ ಸಂಪಾದಕೀಯ ಬಳಗಕ್ಕೂ ಹಾಗು ಪ್ರತಿಕ್ರಿಯಿಸುವ ಮೂಲಕ ಆಗಾಗ ಬೆನ್ನು ತಟ್ಟುವ, ಒಮ್ಮೊಮ್ಮೆ ಕಿವಿ ಹಿಂಡುವ ಎಲ್ಲರಿಗೂ ಧನ್ಯವಾದ. ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟ ಸತೀಶ್ ಜಿ.ಟಿ., ಆರಂಭದಿಂದಲೂ ನನ್ನ ಬರಹಗಳ ಕುರಿತು ತಮಗನಿಸಿದ್ದನ್ನು ಮುಕ್ತವಾಗಿ ಹೇಳುವ ಮೂಲಕ ತಪ್ಪುಗಳನ್ನು ತಿದ್ದಿಕೊಳ್ಳಲು ನೆರವಾಗುತ್ತಿರುವ ಮಂಜು ಬನವಾಸೆ ಹಾಗು ಸ್ನೇಹಿತರು ಮತ್ತು ನನ್ನ ಬರಹಗಳ ಓದುಗರೂ ಆದ ಗಣೇಶ್, ಪ್ರೇಮ್ ಕುಮಾರ್ ಅವರಿಗೆ ಆಭಾರಿ. ಈ ಪುಸ್ತಕ ರೂಪುಗೊಳ್ಳುವ ವೇಳೆಯಲ್ಲಿಯೇ 'ಅಗ್ನಿ' ಪತ್ರಿಕೆಯಲ್ಲಿ ಪುಸ್ತಕ ಪರಿಚಯಿಸಿದ ವೀರಣ್ಣ ಮಡಿವಾಳರ ಹಾಗು 'ಅವಧಿ'ಯಲ್ಲಿ ಪುಸ್ತಕದ ಕುರಿತು ಮಾಹಿತಿ ಹಂಚಿಕೊಂಡ ಜಿ.ಎನ್.ಮೋಹನ್ ಅವರಿಗೆ ಧನ್ಯವಾದ.

- ಶರತ್ ಎಚ್.ಕೆ.

## ಈ ಹೊತ್ತಿನ ಪ್ರಶ್ನೆಗಳಿಗೆ ಮುಖಾಮುಖಿಯ ಬರಹಗಳು

ನಾವು ಭಾಗವಾಗಿರುವ ಈ ಕಾಲಕ್ಕೆ ಕೆಲ ವಿಶೇಷ ಗುಣಗಳಿವೆ. ಅಪರಿಚಿತರು ಅಥವಾ ಸುಮಾರಾಗಿ ಪರಿಚಿತರಾದವರ ಬಗ್ಗೆ ಕೆಲ ಬೇಸಿಕ್ ಮಾಹಿತಿ ಇಟ್ಟುಕೊಂಡು ಅವರ ರಾಜಕೀಯ ಒಲವು, ನಿಲುವುಗಳ ಬಗ್ಗೆ ತೀರಾ ಸುಲಭವಾಗಿ ಅಷ್ಟೇನೂ ಸ್ಪಷ್ಟವಲ್ಲದ ಅಭಿಪ್ರಾಯಕ್ಕೆ ಬಂದು ಬಿಡಬಹುದು. ಯಾರದೇ ಮನೆಗೆ ಮೊದಲ ಬಾರಿಗೆ ಭೇಟಿ ಕೊಟ್ಟಾಗಲೂ, ಅವರು ಮನೆಗೆ ತರಿಸುತ್ತಿರುವ ಪತ್ರಿಕೆ ಯಾವುದೆಂದು ತಿಳಿದರೂ ಸಾಕು, ಅವರ ಬಗ್ಗೆ ಒಂದು ಅಭಿಪ್ರಾಯಕ್ಕೆ ಬಂದುಬಿಡುವ ಸಾಧ್ಯತೆ ಇದೆ. ಇದೇ ರೀತಿ ಈಗ್ಗೆ ಮೂರ್ನಾಲ್ಕು ವರ್ಷಗಳ ಹಿಂದೆ ಎಂಜಿನಿಯರಿಂಗ್ ಪದವಿ, ಸ್ನಾತಕೋತ್ತರ ಪದವಿ ಮುಗಿಸಿ, ಪ್ರತಿಷ್ಠಿತ ಕಾಲೇಜೊಂದರಲ್ಲಿ ಎಂಜಿನಿಯರಿಂಗ್ ಪಾಠ ಮಾಡುವ ಯುವಕ ಈ ಹೊತ್ತಿನ ಸಾಮಾಜಿಕ, ಆರ್ಥಿಕ, ರಾಜಕೀಯ ವಿಚಾರಗಳಿಗೆ ಹೇಗೆ ಪ್ರತಿಕ್ರಿಯಿಸಬಹುದು ಎಂದು ಊಹಿಸಬಹುದು. ಆದರೆ, ಎಚ್.ಕೆ.ಶರತ್ ವಿಚಾರದಲ್ಲಿ ಆ ಎಲ್ಲಾ ಲೆಕ್ಕಾಚಾರಗಳು ತಲೆಕೆಳಗಾಗಿರುತ್ತವೆ.

ಇದು ಶರತ್ ಅವರ ಎರಡನೇ ಲೇಖನಗಳ ಸಂಗ್ರಹ. ಮೊದಲನೆಯದನ್ನು ತೊದಲು ಎಂದರು. ಎರಡನೆಯದಕ್ಕೆ ಎರಡು ಗೋಡೆಗಳ ಚೌಕಟ್ಟು ಹಾಕಿ ಇ-ಬುಕ್ ಮಾದರಿಯಲ್ಲಿ ಮುಕ್ತವಾಗಿ ಹರಿಯಬಿಟ್ಟಿದ್ದಾರೆ. ಅವರೇ ಪದೇ ಪದೇ ಒಡನಾಡಿಗಳಲ್ಲಿ ಹೇಳಿಕೊಳ್ಳುವಂತೆ, ಅವರ ಅನುಭವಗಳೇ ಬರಹಗಳಿಗೆ ಆಧಾರ. ಆ ಕಾರಣಕ್ಕೆ ಅವರು ಅತೀ ಸೂಕ್ಷ್ಮ ನೋಡುಗ, ಕೇಳುಗ ಹಾಗೂ ಭಾಗೀದಾರ. ಇತ್ತೀಚೆಗಂತೂ ನಮ್ಮ ಮಾತು, ಹರಟೆ ಮಧ್ಯೆ ಕೆಲ ವಿಶಿಷ್ಟ ಎನ್ನುವುದೇನಾದರೂ ಘಟಿಸಿ ಹೋದರೆ, ಒಮ್ಮೆ ಶರತ್ ನತ್ತ ಕಣ್ಣು ಹಾಯಿಸಿ, 'ಸದ್ಯದಲ್ಲೇ ಇದು

ಯಾವುದೋ ಪತ್ರಿಕೆಗೆ ಆಹಾರ ಆಗಬಹುದು' ಎಂದು ಅನೇಕರು ಭವಿಷ್ಯ ನುಡಿದಿದ್ದಾರೆ. ಅಷ್ಟೇ ಅಲ್ಲ, ಹಲವು ಬಾರಿ ಆ ಭವಿಷ್ಯ ನಿಜವಾಗಿದೆ.

ಸದ್ಯ ಮಾಧ್ಯಮ ಹಾಗೂ ಸಾಮಾಜಿಕ ಜಾಲತಾಣಗಳಿಗೆ ತೆರೆದುಕೊಂಡಿರುವ ಬಹುತೇಕರು ಆಗಾಗ ಚರ್ಚೆ ಮಾಡುವ ಬಹುತೇಕ ಎಲ್ಲಾ ವಿಚಾರಗಳನ್ನು ಶರತ್ ಚರ್ಚಿಸಿದ್ದಾರೆ. ಹಾಗೂ ಆ ಎಲ್ಲಾ ವಿಚಾರಗಳಲ್ಲೂ ಅವರ ನಿಲುವನ್ನು ಸ್ಪಷ್ಟವಾಗಿ ಹೇಳುತ್ತಾರೆ. ತಮ್ಮ ವಯೋಮಾನಕ್ಕೆ ದಕ್ಕಿದ ಅನುಭವ ಹಾಗೂ ಸಾಮಾನ್ಯ ಜ್ಞಾನ (ತಿಳವಳಿಕೆ)ಗಳನ್ನು ಮುಂದೆ ಮಾಡಿ ತಮ್ಮ ನಿಲುವನ್ನು ಸಮರ್ಥಿಸುತ್ತಾರೆಯೇ ಹೊರತು, ಅದಕ್ಕೆ ಯಾವ ಸಿದ್ಧಾಂತದ ಮೊರೆ ಹೋಗುವುದಿಲ್ಲ.

ಮೀಸಲಾತಿ ಬಗ್ಗೆ ಬರೆಯುವಾಗ, ಮೊದಮೊದಲು ತನಗೂ ಅದರ ಬಗ್ಗೆ ಬೇರೆಯದೇ ಅಭಿಪ್ರಾಯ ಇತ್ತು, ಆದರೆ ಜಾತಿ ವ್ಯವಸ್ಥೆಯ ವಿಕಾರಗಳು ಅರ್ಥವಾಗುತ್ತಿದ್ದಂತೆಯೇ ಗ್ರಹಿಕೆ ಬೇರೆ ಆಯಿತು ಎನ್ನುತ್ತಾರೆ. ಅಭಿಪ್ರಾಯ ಬದಲಾಗಲು ತನ್ನ ಸುತ್ತಲಿನ ಆಗುಹೋಗುಗಳಿಗೆ ಅವರು ಮುಕ್ತವಾಗಿ ತೆರೆದುಕೊಂಡಿದ್ದೇ ಕಾರಣ. ಹೆಚ್ಚು ಕಮ್ಮಿ ಅವರೊಟ್ಟಿಗೆ ವಿದ್ಯಾಭ್ಯಾಸ ಆರಂಭಿಸಿದ ಅನೇಕ ಮಂದಿ ಇಂದಿಗೂ ಮೀಸಲಾತಿ ವಿರೋಧಿ ಧೋರಣೆಯಲ್ಲೇ ಬಿದ್ದು ನೇತಾಡುತ್ತಿರಬಹುದು. ಕಾರಣ ಅವರಿಗೆ ಜಾತಿ ವ್ಯವಸ್ಥೆಯ ವಿಕಾರಗಳು ಕಣ್ಣಿಗೆ ಬೀಳದಿರಬಹುದು ಅಥವಾ ಬಿದ್ದಿದ್ದರೂ ಅವರ ಅರಿವನ್ನು ಎಚ್ಚರಿಸುವ ಮಟ್ಟಕ್ಕೆ ಪರಿಣಾಮ ಬೀರಿಲ್ಲ. ಇದರೊಟ್ಟಿಗೆ ಬಲಾಢ್ಯರು ಮೀಸಲಾತಿ ಸೌಲಭ್ಯ ಪಡೆಯುವ ಬಗ್ಗೆ ಶರತ್ ಅವರಿಗೆ ತಕರಾರಿದೆ. ಶತಮಾನಗಳ ಕಾಲ ಅನುಭವಿಸಿದ ಜಾತಿ ಕೇಂದ್ರಿತ ಶೋಷಣೆ ಆರ್ಥಿಕ ಸ್ವಾತಂತ್ರ್ಯದಿಂದ ಅಂತ್ಯ ಕಂಡಿದೆ ಎಂಬ ತೀರ್ಮಾನಕ್ಕೆ ಸ್ವಲ್ಪ ಅವಸರದಲ್ಲೇ ಬಂದಂತೆ ಕಾಣುತ್ತಾರೆ. ಆದರೆ, ಆ

ಅಭಿಪ್ರಾಯ ಮುಂದೆ ಬದಲಾಗಬಹುದು. ಖಾಸಗಿ ವಲಯದಲ್ಲಿ ಮೀಸಲಾತಿ ಬಗ್ಗೆ ಚರ್ಚೆ ನಡೆಯುತ್ತಿರುವ ಹೊತ್ತಿನಲ್ಲಿ ಶರತ್, ಈಗಾಗಲೇ ಅಲ್ಲಿ ಅನಧಿಕೃತವಾಗಿ ಜಾರಿಯಲ್ಲಿರುವ 'ಜಾತೀಯತೆ' ಬಗ್ಗೆ ಮಾತನಾಡುತ್ತಾರೆ ಹಾಗೂ ಆ ಮೂಲಕ ಖಾಸಗಿ ವಲಯದಲ್ಲಿ ಮೀಸಲಾತಿ ಏಕೆ ಅಗತ್ಯ ಎನ್ನುವುದನ್ನು ಸ್ಪಷ್ಟವಾಗಿ ನಿರೂಪಿಸುತ್ತಾರೆ.

ಇವರ ಮನೆಗೆ ಬಂದರೆ ಕಾಫಿ ಕುಡಿಯದ ಅಯ್ಯನವರ ಮನೆ ವಿವರಣೆ ನೀಡುವಾಗ, ಒಂದು ಪ್ರಸಂಗ ನಿರೂಪಿಸಿದ್ದಾರೆ. ಅದೆಂದರೆ, ಅಯ್ಯನವರ ಮನೆಯವರು ತಮ್ಮ ಶೌಚಗುಂಡಿಯನ್ನು ತಾವೇ ಶುಚಿಗೊಳಿಸಿದ್ದು. ತಮ್ಮ ಮನೆಯಲ್ಲಿ ಕಾಫಿ ಕುಡಿಯದವರಲ್ಲೂ ಮಾದರಿಯಾಗಬಹುದಾದ ನಡೆಯೊಂದನ್ನು ಇವರು ಗುರುತಿಸಿ, ನೆನಪಿಟ್ಟುಕೊಂಡು ದಾಖಲಿಸಿದ್ದು ಸ್ತುತ್ಯಾರ್ಹ. ಆದರೆ, ನನಗೆ ಅವರು ಹಾಗೇ ಶುಚಿಗೊಳಿಸಿಕೊಂಡರೆ... ಎಂಬುದು ಇನ್ನೂ ಅಚ್ಚರಿಯೇ. ಜೊತೆಗೆ ಇಲ್ಲಿಯ ಕೆಲವು ಆಲೋಚನೆಗಳಿಗೆ ಇನ್ನೊಂದಿಷ್ಟು ದೀರ್ಘವಾಗಬಲ್ಲ ಸಾಮರ್ಥ್ಯ ಇದೆ. ಅಲ್ಲಲ್ಲಿ ಲೇಖಕರು ಯಾವುದೋ ಪ್ರಸ್ತುತ ಬೆಳವಣಿಗೆಗೆ ತಮ್ಮದೊಂದು ಅಭಿಪ್ರಾಯ ಹೇಳಲೆಂದಷ್ಟೇ ಬರೆದಿರುವಂತೆ ತೋರುತ್ತವೆ. ಜಯಂತಿಗಳ ಆಚರಣೆ ವಿಚಾರವಾಗಿ ಇವರ ಬರಹ ಅಂತಹದೊಂದು ಉದಾಹರಣೆ. ಆ ಲೇಖನದಲ್ಲಿ, ಶರತ್ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ದಾಖಲಿಸದೆ, ಸರಕಾರ ಜಯಂತಿ ಮಾಡಿ ಸಾಧಿಸಿದ್ದೇನು ಎಂಬ ಪ್ರಶ್ನೆಯನ್ನೆತ್ತಿ ಸುಮ್ಮನಾಗಿಬಿಡುತ್ತಾರೆ. ಇಲ್ಲಿರುವ ಎಲ್ಲಾ ಬರಹಗಳು ಪತ್ರಿಕೆಗೆ ಬರೆದವಾದ್ದರಿಂದ, ಅಂತಹದೊಂದು ಮಿತಿ ಸಹಜ.

ಇಲ್ಲಿಯ ಬರಹಗಳ ಬಗ್ಗೆ ಅನಿಸಿಕೆ ಬರೆದುಕೊಡಿ ಎಂದ ಕಾರಣಕ್ಕೆ ನನಗನ್ನಿಸಿದ್ದನ್ನು ಇಲ್ಲಿ ದಾಖಲಿಸಿದ್ದೇನೆ. ಇದು ಇ-ಬುಕ್ ಮಾದರಿಯಲ್ಲಿ ಹೊರಬಂದಿದೆ. ನನಗೂ ಸಾಫ್ಟ್ ಕಾಪಿಯೇ ಕೊಟ್ಟಿದ್ದ ಕಾರಣವೋ ಏನೋ... ಮೊದಲ ಲೇಖನ ಓದಿದ ತಕ್ಷಣ

ನನ್ನ ಬೆರಳುಗಳು ಕೆಳಗೆ ಇರಬಹುದಾದ 'ಲೈಕ್' ಬಟನ್ ಗೆ ಹುಡುಕುತ್ತಿದ್ದವು. ಇವನ್ನು ಓದುವ ಎಲ್ಲರಿಗೂ, ಇಲ್ಲಿಯ ಲೇಖನಗಳು ಇಷ್ಟವಾಗುತ್ತವೆ. ಯೋಚನೆಗೆ ಹಚ್ಚುತ್ತವೆ. ಆರೋಗ್ಯವಂತ ಹಾಗೂ ಸಹ್ಯ ಸಮಾಜ ರೂಪಿಸುವ ನಿಟ್ಟಿನಲ್ಲಿ ಇಲ್ಲಿಯ ಬರಹಗಳು ಕೆಲಸ ಮಾಡುತ್ತವೆ.

**- ಸತೀಶ್ ಜಿ.ಟಿ.,**

ಪತ್ರಕರ್ತ, 'ದಿ ಹಿಂದೂ'

## ಒಡಲೊಳಗೆ..

## ನಾನೇಕೆ ಬರೆಯುತ್ತೇನೆ?

ಚಿಕ್ಕಂದಿನಿಂದಲೂ ಜೊತೆಯಾದ ಅಂಜಿಕೆಯಿಂದಾಗಿ ತೀರಾ ಹತ್ತಿರವಾದವರನ್ನು ಹೊರತುಪಡಿಸಿ ಉಳಿದವರೊಂದಿಗೆ ನಾನು ಮಾತನಾಡುತ್ತಿದ್ದದ್ದು ತುಂಬಾ ಕಮ್ಮಿ. ಹೀಗಾಗಿ ಸಂಬಂಧಿಕರಿಂದ 'ಮೂಗ ಬಸಪ್ಪ' ಅಂತ ಕರೆಸಿಕೊಳ್ಳುತ್ತಿದ್ದೆ. ಆದರೂ ಮಾತನಾಡಲೇಬೇಕೆಂದು ನನಗೆ ಅನಿಸುತ್ತಿರಲಿಲ್ಲ.

ಸ್ಕೂಲು ಮುಗಿಸಿ ಕಾಲೇಜಿಗೆ ಹೋಗಲಾರಂಭಿಸಿದ ಮೇಲೆ ನನ್ನೊಳಗಿನ ತಳಮಳಗಳನ್ನು ಎಲ್ಲರಿಗೂ ಹೇಳಿಕೊಂಡು ಹಗುರಾಗಬೇಕೆಂಬ ತುಡಿತ ಕುಡಿಯೊಡೆಯಲಾರಂಭಿಸಿತು. ಅಭಿವ್ಯಕ್ತಿಗೆ ಮಾತನ್ನು ಆಶ್ರಯಿಸಲು ಹೊರಟಾಗಲೆಲ್ಲ, ನಾನು ಹೇಳಬೇಕಿದ್ದನ್ನು ಪರಿಣಾಮಕಾರಿಯಾಗಿ ಹೇಳಲು ಸಾಧ್ಯವಾಗುತ್ತಿಲ್ಲವೆಂಬ ನಿರಾಶೆ ಆವರಿಸುತ್ತಿತ್ತು. ಇದೇ ವೇಳೆ ಜಿಲ್ಲಾ ಕೇಂದ್ರ ಗ್ರಂಥಾಲಯಕ್ಕೆ ಪ್ರತಿ ಭಾನುವಾರವೂ ತಪ್ಪದೇ ಹೋಗಿ ಅಲ್ಲಿರುತ್ತಿದ್ದ ದಿನಪತ್ರಿಕೆ, ಟ್ಯಾಬ್ಲಾಯ್ಡು, ಮ್ಯಾಗಜಿನ್ನು ಇತ್ಯಾದಿಗಳನ್ನೆಲ್ಲ ಓದುವ ಸೆಳೆತಕ್ಕೆ ಒಳಗಾಗಿದ್ದೆ. ನಾನೇಕೆ ಹೀಗೆ ಬರೆಯುವ ಮೂಲಕ ನನಗನಿಸುವುದನ್ನೆಲ್ಲ ಹೇಳಿಕೊಳ್ಳಬಾರದು ಎಂಬ ಯೋಚನೆ ಮೂಡಲಾರಂಭಿಸಿದ್ದೆ ತಡ ಬರೆಯಲಾರಂಭಿಸಿದೆ. ಶುರುವಿನಲ್ಲಿ ರಫ್ ಬುಕ್ಕುಗಳಲ್ಲಿ ಕವನವೆಂದು ಕರೆದುಕೊಂಡು ಏನೇನೊ ಬರೆದಿಡಲು ಶುರುವಿಟ್ಟುಕೊಂಡೆ. ಆನಂತರ ಪುಟ್ಟ ಪುಟ್ಟ ಲೇಖನಗಳನ್ನು ಬರೆಯಲು ಪ್ರಯತ್ನಿಸಿದೆ. ಹೀಗೆ ಶುರುವಾದ ಬರೆಯುವ ಬಯಕೆ ಆನಂತರ ನನ್ನ ಒಂದಷ್ಟು ದುಗುಡಗಳನ್ನು ನಿವಾರಿಸುವ ಸಾಧನವಾಗಿ ನನ್ನೆದುರು ನಿಲ್ಲಲಾರಂಭಿಸಿತು. ನನಗೆ ಅರ್ಥವಾಗದ ಸಂಕೀರ್ಣ ನೋವೊಂದು ಮನಸ್ಸನ್ನು ಆವರಿಸಿದ ಹೊತ್ತಲ್ಲೆಲ್ಲ, ಪೆನ್ನು ಪೇಪರ್ರು ಮುಂದಿಟ್ಟುಕೊಂಡು ಆ ಕ್ಷಣಕ್ಕೆ ಅನಿಸುವುದೆಲ್ಲವನ್ನು ಬರೆದುಬಿಡುತ್ತಿದ್ದೆ.

ಎಷ್ಟೋ ಬಾರಿ ಹೀಗೆ ಮಾಡಿದ ನಂತರ ನನ್ನೊಳಗೊಂದು ನಿರಾಳತೆ ಒಡಮೂಡಿ ಬಿಡುತ್ತಿತ್ತು. ಬರೆಯುವ ಮೂಲಕ ನಾನು ಮಾನಸಿಕವಾಗಿ ಆರೋಗ್ಯಪೂರ್ಣ ನಾಗಬಹುದೆನಿಸಿತು.

ಆನಂತರ ಬರೆದಿದ್ದನ್ನು ಪತ್ರಿಕೆಗಳಿಗೆ ಕಳುಹಿಸಲಾರಂಭಿಸಿದೆ. ಕೆಲವು ಪ್ರಕಟಗೊಳ್ಳುತ್ತಿದ್ದವು. ನಾನು ಬರೆದದ್ದನ್ನೇ ಒಂದಷ್ಟು ದಿನ ಬಿಟ್ಟು ಮತ್ತೆ ನಾನೇ ಓದಿದರೆ, ಥೂ ಹೀಗೂ ಬರೆದಿದ್ದೀನಾ ಅನಿಸುತ್ತಿತ್ತು.

ಬರೆಯುವುದಲ್ಲದೇ ಇತರರು ಬರೆದಿರುವುದನ್ನು ಓದುವುದರಲ್ಲೂ ಅಪರಿಮಿತ ಆನಂದ ದಕ್ಕುತ್ತಿತ್ತು. ನನ್ನ ಒಂದಷ್ಟು ಪ್ರಶ್ನೆಗಳಿಗೆ ಬೇರೆಯವರ ಬರಹಗಳಲ್ಲಿ ಉತ್ತರಗಳು ದೊರಕಲಾರಂಭಿಸಿದವು. ಹೀಗಾಗಿ ಓದು ಮತ್ತು ಬರವಣಿಗೆ ನನ್ನ ಬದುಕಿನ ಭಾಗವೇ ಆಗಿ ಹೋದವು. ನನ್ನ ಸೋಮಾರಿತನ ಹಾಗು ಬದುಕಿನ ವಿನ್ಯಾಸದ ದೆಸೆಯಿಂದಾಗಿ ಇದುವರೆಗೂ ಹೆಚ್ಚು ಪುಸ್ತಕಗಳನ್ನು ಓದಲು ಸಾಧ್ಯವಾಗಿಲ್ಲವಾದರೂ, ಮುಂಬರುವ ದಿನಗಳಲ್ಲಿ ಹೆಚ್ಚೆಚ್ಚು ಓದಬೇಕೆಂಬ ನಿರ್ಧಾರ ಕೈಗೊಂಡಿದ್ದೇನೆ.

ಅನುಭವ ಹಾಗು ಅನಿಸಿಕೆಗಳನ್ನು ಹಂಚಿಕೊಳ್ಳುವ ಸಲುವಾಗಿ ಬರೆಯುತ್ತ ಬಂದಿರುವ ನನ್ನಲ್ಲಿ, ಮಹತ್ವಪೂರ್ಣವಾದುದೇನನ್ನೋ ಬರೆದಿದ್ದೇನೆ ಅಥವಾ ಮುಂದಾದರೂ ಬರೆಯಬೇಕೆಂಬ ತುಡಿತಗಳೇನು ಇಲ್ಲ.

(ಪ್ರಜಾವಾಣಿ ದೀಪಾವಳಿ ವಿಶೇಷಾಂಕ-2015)



# ಪೂರ್ವಗ್ರಹಗಳ ಪಾದಕ್ಕೆ ಮಾಧ್ಯಮ ಎರಗಬಹುದೇ?

ಯಾವುದೇ ವ್ಯಕ್ತಿಯ ಖಾಸಗಿ ಬದುಕು ಗೌರವಿಸುವ ಮತ್ತು ಅದರಿಂದ ಅಂತರ ಕಾಯ್ದುಕೊಳ್ಳುವ ಸಂಯಮ ನಮ್ಮಲ್ಲಿ ತೆಳುವಾಗುತ್ತಿದೆಯೇ? ಇತ್ತೀಚೆಗಿನ ಕೆಲ ವಿದ್ಯಮಾನಗಳಿಗೆ ಸಿಕ್ಕ ಪ್ರಚಾರ ಮತ್ತು ಅದರಿಂದ ವ್ಯಕ್ತವಾಗಲಾರಂಭಿಸಿರುವ ಪ್ರತಿಕ್ರಿಯೆಗಳನ್ನು ಗಮನಿಸಿದರೆ ಈ ಮೇಲಿನ ಪ್ರಶ್ನೆ ಎದುರುಗೊಳ್ಳುತ್ತದೆ.

ವಯಸ್ಸು ಅರವತ್ತು ವರ್ಷ ಮೀರಿದ ವ್ಯಕ್ತಿಯೊಬ್ಬರು ಇಪ್ಪತ್ತೆಂಟರ ಆಸುಪಾಸಿನ ಯುವತಿಯನ್ನು ಮದುವೆಯಾಗಲು ಮುಂದಾದದ್ದು ಮಾಧ್ಯಮಗಳ ಪಾಲಿಗೆ ಅಸಹನೀಯ ವಿದ್ಯಮಾನವಾಗಿ ಏಕೆ ಗೋಚರಿಸಿತು? ಒಂದು ವೇಳೆ ಈ ಮದುವೆ ಪರಸ್ಪರರ ಒಪ್ಪಿಗೆಯ ಮೇರೆಗೆ ನೆರವೇರದೆ ಹೋಗಿದ್ದ ಪಕ್ಷದಲ್ಲಿ ಯುವತಿಗೆ ನ್ಯಾಯ ಒದಗಿಸುವ ನೆಪವನ್ನಾದರೂ ಮುಂದಿಟ್ಟುಕೊಂಡು ಅವರಿಬ್ಬರ ಖಾಸಗಿ ಬದುಕಿನಲ್ಲಿ ಹಸ್ತಕ್ಷೇಪ ಮಾಡುವ ಅಧಿಕಾರವನ್ನು ಮಾಧ್ಯಮಗಳು ಅದ್ಹೇಗೊ ದಕ್ಕಿಸಿಕೊಂಡು ಬಿಡುತ್ತಿದ್ದವು. ಆದರೆ ಈ ಪ್ರಕರಣದಲ್ಲಿ ಯುವತಿ ತಾವಿಬ್ಬರು ಪರಸ್ಪರ ಪ್ರೀತಿಸಿ ಮದುವೆಯಾಗಿದ್ದೇವೆ ಎಂದು ಸಾರಿದರೂ, ಅವರಿಬ್ಬರನ್ನು ಅವರ ಪಾಡಿಗೆ ಬಿಡುವ ಸೌಜನ್ಯ ತೋರುವ ಗೋಜಿಗೆ ದೃಶ್ಯ ಮಾಧ್ಯಮ ಹೋಗಲೇ ಇಲ್ಲ. ಈ ವಿಚಾರದಲ್ಲಿ ಮುದ್ರಣ ಮಾಧ್ಯಮ ಕೂಡ ಹಿಂದೆ ಬೀಳಲು ಹಿಂಜರಿದದ್ದು ಗಮನಾರ್ಹ.

ಕಾನೂನು ಸಮ್ಮತಿಸುವ ಯಾವುದೇ ವಯಸ್ಸಿನಲ್ಲಿ ಹೆಣ್ಣು ಹಾಗು ಗಂಡು ಮದುವೆಯಾದರೆ ಅದನ್ನು ಮಾಧ್ಯಮವೂ ಒಳಗೊಂಡಂತೆ ಉಳಿದವರೆಲ್ಲರೂ ಏಕೆ ಗೇಲಿಯ ವಿಷಯವಾಗಿ ಪರಿಗಣಿಸಬೇಕು? ಕಣ್ಣೆದುರೇ ಜರುಗುವ ಬಾಲ್ಯ ವಿವಾಹಗಳಿಗೆ ಹಾಗು ಗಂಡು-ಹೆಣ್ಣು ಪರಸ್ಪರ ಒಪ್ಪದೇ ಆಗುವ ವಿವಾಹಗಳಿಗೂ

ತನ್ನದೇ ಆದ ನೂರೆಂಟು ಕಾರಣಗಳನ್ನು ಮುಂದಿಟ್ಟುಕೊಂಡು ಸಮ್ಮತಿಯ ಮುದ್ರೆ ಒತ್ತುವ ಸಮಾಜಕ್ಕೆ, ಸಾಕಷ್ಟು ವಯಸ್ಸಿನ ಅಂತರವಿದ್ದಾಗ್ಯೂ ಪರಸ್ಪರ ಪ್ರೀತಿಸಿ ಕೆಲವರು ಒಂದಾಗಿ ಬಾಳುವ ನಿರ್ಣಯ ಕೈಗೊಂಡರೆ ಅದನ್ನು ಗೌರವಿಸಬೇಕೆಂದು ಏಕೆ ಅನಿಸುವುದಿಲ್ಲ?

ಕೆಲ ತಿಂಗಳುಗಳ ಹಿಂದೆ ಅನ್ಯಜಾತಿಯ ಯುವಕನನ್ನು ತಮ್ಮ ಮಗಳು ಪ್ರೀತಿಸುತ್ತಿದ್ದಾಳೆಂದು ತಿಳಿದು ಮರ್ಯಾದೆಗೆ ಅಂಜಿ ಪೋಷಕರಿಬ್ಬರು ಆತ್ಮಹತ್ಯೆಗೆ ಶರಣಾದ ಸಂದರ್ಭದಲ್ಲೂ ಕೆಲ ಮಾಧ್ಯಮಗಳು ಪೋಷಕರ ದುಡುಕು ನಿರ್ಧಾರ ವಿಮರ್ಶಿಸುವ ಬದಲಿಗೆ ಜಾತಿ ಮೀರಿ ಪ್ರೀತಿಸಿದ ಯುವತಿಯನ್ನೇ ಎಲ್ಲದಕ್ಕೂ ಹೊಣೆಯಾಗಿಸಿದ್ದು ಏನನ್ನು ಸೂಚಿಸುತ್ತದೆ? ಸಮಾಜದಲ್ಲಿ ಬೇರೂರಿರುವ ಮನುಷ್ಯ ಘನತೆಗೆ ಬೆನ್ನು ತೋರುವ ಮನಸ್ಥಿತಿಯನ್ನೇ ಸಾಮಾಜಿಕ ಮೌಲ್ಯವಾಗಿ ಬಿಂಬಿಸಿ, ತಾವು ಆ ಮೌಲ್ಯದ ಉಳಿವಿಗಾಗಿ ದನಿ ಎತ್ತುತ್ತಿದ್ದೇವೆ ಎನ್ನುವ ಧಾಟಿಯನ್ನು ದೃಶ್ಯ ಮಾಧ್ಯಮ ಆವಾಹಿಸಿಕೊಳ್ಳುವುದು ಟಿಆರ್ಪಿಗಾಗಿಯೋ ಅಥವಾ ತಮಗಿರುವ ಅದಮ್ಯ ಸಾಮಾಜಿಕ ಕಳಕಳಿ(?)ಗಾಗಿಯೋ ಎಂಬುದನ್ನು ತಿಳಿಯುವುದು ಕಷ್ಟವೇನಲ್ಲ. ಸಮಾಜದ ಪೂರ್ವಗ್ರಹಗಳಿಗೆ ಪೂರಕವಾದ ನಿಲುವು ತಳೆಯುವುದು ಹೆಚ್ಚು ಲಾಭದಾಯಕವೆನ್ನುವ ಭಾವನೆ ದೃಶ್ಯ ಮಾಧ್ಯಮ ವಲಯದಲ್ಲಿ ಬೇರೂರಿದೆಯೇ? ಇದರ ದುಷ್ಪರಿಣಾಮಗಳ ಅರಿವಿಲ್ಲವೇ?

'ಅಪೂರ್ವ' ಪ್ರೇಮ ಕಥೆ ಎಂದೇ ಪರಿಗಣಿಸಲ್ಪಟ್ಟ ಇತ್ತೀಚೆಗಿನ ಪ್ರಕರಣ ಪರಿಚಿತ ವಲಯದಲ್ಲಿನ ಕೆಲವರ ಬದುಕಿನ ಮೇಲೆ ಬೀರಲಾರಂಭಿಸಿರುವ ವ್ಯತಿರಿಕ್ತ ಪರಿಣಾಮ ಇಲ್ಲಿ ಉಲ್ಲೇಖನಾರ್ಹ.

ಬದುಕಿನುದ್ದಕ್ಕೂ ಸಮಾಜಮುಖಿಯಾಗಿಯೇ ಇರುವ ಪರಿಚಿತರೊಬ್ಬರು ತಮ್ಮ ಐವತ್ನಾಲ್ಕನೇ ವಯಸ್ಸಿನವರೆಗೂ ಮದುವೆಯಾಗದೆ ಅವಿವಾಹಿತರಾಗಿಯೇ ಉಳಿದಿದ್ದರು. ಕಳೆದ ವರ್ಷ ಇದ್ದಕ್ಕಿದ್ದಂತೆಯೇ ಇಪ್ಪತ್ತೆಂಟರ ವಯೋಮಾನದ ಯುವತಿಯನ್ನು ಪ್ರೀತಿಸಿ ಮದುವೆಯಾದರು. ಮದುವೆಯ ವಿಚಾರ ಹೊರ ಜಗತ್ತಿಗೆ ತಿಳಿದ ಪ್ರಾರಂಭದ ದಿನಗಳಲ್ಲಿ ಅವರಿಬ್ಬರು ಎಲ್ಲರ ಪಾಲಿಗೂ ಗೇಲಿಗೆ ಸರಕಾಗಿದ್ದರು. ಆನಂತರ ಈ ವಿಚಾರ ತಣ್ಣಗಾಗಿತ್ತು. ಅವರು ಕೂಡ ತಮ್ಮನ್ನು ಸುತ್ತುವರೆದ ಅಸಹನೆಯ ವರ್ತುಲದಿಂದ ಬಿಡುಗಡೆ ಹೊಂದುವ ಪ್ರಯತ್ನದಲ್ಲಿದ್ದರು. ಆದರೆ ಇತ್ತೀಚೆಗಿನ 'ಅಪೂರ್ವ' ಪ್ರೇಮವೆಂದು ವ್ಯಂಗ್ಯವಾಗಿ ಬಿಂಬಿಸಲ್ಪಟ್ಟ ಪ್ರಕರಣಕ್ಕೆ ಸಿಕ್ಕ ನಕಾರಾತ್ಮಕ ಪ್ರಚಾರದ ದೆಸೆಯಿಂದಾಗಿ ಇವರು ಕೂಡ ಮಾನಸಿಕವಾಗಿ ಸಾಕಷ್ಟು ನೋವು ಅನುಭವಿಸಬೇಕಾದ ಪರಿಸ್ಥಿತಿ ಎದುರಾಗಿದೆ. ಮರೆತೇ ಹೋಗಿದ್ದ ಇವರಿಬ್ಬರ ಮದುವೆಯ ವಿಚಾರವೂ ಮತ್ತೊಮ್ಮೆ ಮುನ್ನೆಲೆಗೆ ಬಂದು ಎಲ್ಲರ ವಕ್ರದೃಷ್ಟಿಗೂ ತುತ್ತಾಗುತ್ತಿದೆ.

ನಮ್ಮ ಸಮಾಜದಲ್ಲಿ ವರನಿಗಿಂತ ವಧುವಿನ ವಯಸ್ಸು ಕಡಿಮೆ ಇರಬೇಕೆಂಬ ನಿಲುವು ಬಲವಾಗಿದೆ. ಮೊದಲೆಲ್ಲ ಕನಿಷ್ಠವೆಂದರೂ ಮೂರು ವರ್ಷಕ್ಕೆ ಸೀಮಿತಗೊಂಡಿದ್ದ ವಯಸ್ಸಿನ ಅಂತರ, ಬದಲಾದ ಸಾಮಾಜಿಕ ಸಂರಚನೆಯ ಪರಿಣಾಮವಾಗಿ ಈಗೀಗ ವಧು-ವರ ಇಬ್ಬರೂ ಸಮಾನ ವಯಸ್ಕರಾಗಿದ್ದರೂ ಸಮಾಜದ ಸಮ್ಮತಿ ದೊರೆಯುತ್ತಿದೆ. ಅದೇ ಒಂದು ವೇಳೆ ಮದುವೆಯಾಗುವ ಹುಡುಗನಿಗಿಂತ ಹುಡುಗಿಗೆ ಹೆಚ್ಚು ವಯಸ್ಸಾಗಿದ್ದರೆ ಅದು ಸಮಾಜದ ಪಾಲಿಗೆ ಸುಲಭವಾಗಿ ಜೀರ್ಣಿಸಿಕೊಳ್ಳಲಾಗದ ಸಂಗತಿಯಾಗಿ ತೋರುತ್ತದೆ. ಹಾಗಾಗಿಯೇ ಇಂದಿಗೂ ಜನಪ್ರಿಯ ದಂಪತಿಗಳಾದ ಅಂಜಲಿ-ಸಚಿನ್ ತೆಂಡೂಲ್ಕರ್, ಐಶ್ವರ್ಯ-

ಅಭಿಷೇಕ್ ಬಚ್ಚನ್ ಇನ್ನು ಮುಂತಾದವರ ಕುರಿತು ನಮ್ಮ ಗಮನ ವಿಶೇಷವಾಗಿ ಹರಿಯುತ್ತದೆ.

ಅಷ್ಟಕ್ಕೂ ವರನಿಗಿಂತ ವಧು ವಯಸ್ಸಿನಲ್ಲಿ ಚಿಕ್ಕವಳಾಗಿರಬೇಕೆಂಬ ಅಂಶ ಮದುವೆ ಸಂದರ್ಭದಲ್ಲಿ ಪ್ರಮುಖ ಅರ್ಹತೆಯಾಗಿ ಬಿಂಬಿತಗೊಳ್ಳುವ ಹಿನ್ನೆಲೆಯಲ್ಲಿ ಇರಬಹುದಾದ ಮನಸ್ಥಿತಿಯಾದರೂ ಯಾವುದು? ವಯಸ್ಸಿನಲ್ಲಿ ತನಗಿಂತ ಎರಡು-ಮೂರು ವರ್ಷ ದೊಡ್ಡವಳಾದ ಯುವತಿಯನ್ನು ಪ್ರೀತಿಸಿದ ಕಾರಣಕ್ಕೆ ತನ್ನ ಪ್ರೇಮ ವಿವಾಹಕ್ಕೆ ಮನೆಯವರ ಅನುಮತಿ ದಕ್ಕಿಸಿಕೊಳ್ಳಲು ಸೋತ ಸ್ನೇಹಿತನಿಗೆ ಅವರ ಪೋಷಕರು ಹೇಳಿದ ಕಿವಿಮಾತು ನಮ್ಮ ಸಮಾಜದಲ್ಲಿ ಬೇರೂರಿರುವ ಪುರುಷ ಪ್ರಧಾನ ಮನಸ್ಥಿತಿಗೂ ಕನ್ನಡಿ ಹಿಡಿಯಬಹುದೇನೊ?

'ನೀನು ಅವಳನ್ನು ಮದುವೆ ಆದ್ರೆ ಜೀವನವಿಡಿ ಅವಳ ಗುಲಾಮನಾಗಿಯೇ ಬದುಕಬೇಕಾಗುತ್ತೆ' ಎನ್ನುವ ಎಚ್ಚರಿಕೆ ರೂಪದ ಆಕ್ಷೇಪವನ್ನು ಸ್ನೇಹಿತನ ತಂದೆ ಹೊರಗೆಡವಿದ್ದರು. ತನಗೆ ಹೆಂಡತಿಯ ಗುಲಾಮನಾಗಿರಲು ಯಾವುದೇ ಅಭ್ಯಂತರವಿಲ್ಲವೆಂದ ಅವನ ಮಾತು ಕೇಳಿ ಮತ್ತಷ್ಟು ಸಿಡಿಮಿಡಿಗೊಂಡಿದ್ದ ಅವರು, ಇನ್ನು ಏನೇನೋ ಹೇಳಿ ತಮ್ಮ ಮಗನ ಮನವೊಲಿಸುವ ವ್ಯರ್ಥ ಕಸರತ್ತು ನಡೆಸಿದ್ದರು. ಹುಡುಗ ಹುಡುಗಿಗಿಂತ ಹಿರಿಯನಾಗಿದ್ದರೆ ಅವಳನ್ನು ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳಬಹುದೆನ್ನುವ ಮನಸ್ಥಿತಿ ಇದಕ್ಕೆಲ್ಲ ಕಾರಣವಲ್ಲವೇ?

ಎರಡು ಕಟುಂಬಗಳ ಪರಸ್ಪರ ಸಮ್ಮತಿಯ ಮೇಲೆ ನಡೆಯುವ ಸಾಂಪ್ರದಾಯಿಕ ಮದುವೆಗಳು ನಾನಾ ಕಾರಣಗಳಿಗಾಗಿ ಮುರಿದು ಬಿದ್ದರೂ ಅದನ್ನು ನಮ್ಮ ಸಮಾಜ ವಿಶೇಷ ವಿದ್ಯಮಾನವಾಗಿ ಗಮನಿಸಲು ಬಯಸದು. ಜಾತಿ, ಧರ್ಮ, ವಯಸ್ಸು ಮತ್ತು ಅಂತಸ್ತಿನ ತಡೆಗೋಡೆಗಳನ್ನು ಒಡೆದು ಬಾಳಸಂಗಾತಿಗಳಾದವರು ಮುಂದೆ

ಬೇರೆಯಾದರೆ, ಅದು ಹೀಗೆ ಮುರಿದು ಕಟ್ಟುವ ಕ್ರಿಯೆಯಲ್ಲಿ ತೊಡಗಿಕೊಳ್ಳುವವರ ಪಾಲಿಗೆ ದೊಡ್ಡ ಪಾಠವಾಗಲೆಂದು ಸಮಾಜ ಬಯಸುತ್ತದೆ. ಹಾಗೆ ಬಯಸುವ ಪೂರ್ವಗ್ರಹ ಪೀಡಿತ ಸಮಾಜದ ಮನಸ್ಥಿತಿಯನ್ನೇ ಎತ್ತಿ ಹಿಡಿಯುವ ಮೂಲಕವೇ 'ಉತ್ತಮ ಸಮಾಜ' ರೂಪಿಸಲು ಹೊರಡುವ ದೃಶ್ಯ ಮಾಧ್ಯಮಕ್ಕೆ ಆತ್ಮವಿಮರ್ಶೆ ಮಾಡಿಕೊಳ್ಳಬೇಕೆಂದು ಅನಿಸುವುದಾದರೂ ಯಾವಾಗ?

(ಜುಲೈ 2016, ಗೌರಿ ಲಂಕೇಶ್)



# ಪುಟ್ಟ ಹುಡುಗನ ಕಣ್ಣಲ್ಲಿ ನಾವು...?

ಅಲ್ಲಿರುವ ದೇವಸ್ಥಾನದಿಂದಲೇ ಪ್ರಸಿದ್ಧವಾಗಿರುವ ಮಲೆನಾಡು ಹೃದಯ ಭಾಗದಲ್ಲಿರುವ ಆ ಊರಿಗೆ ಅನ್ಯ ಕೆಲಸ ನಿಮಿತ್ತ ತೆರಳಿದ್ದೆವು. ಕೆಲಸ ಮುಗಿದಾದ ಮೇಲೆ ಅಲ್ಲಿರುವ (ಅಥವಾ ಹಾಗೆ ನಂಬಿರುವ) ದೇವರ ದರ್ಶನ ಪಡೆಯಲು ಜೊತೆಗಿದ್ದ ಸ್ನೇಹಿತರು ಹೊರಡಲು ಅನುವಾದರು. ದೇವರನ್ನು ಒಲಿಸಿಕೊಳ್ಳುವ ಸಲುವಾಗಿ ನಡೆಸುವ ಯಾವುದೇ ಕ್ರಿಯೆ ಎಡೆಗೂ ಒಲವು ಹೊಂದಿರದ ನಾನೂ ಸಹ ಅವರೊಂದಿಗೆ ಹೊರಟೆ.

ನಮ್ಮೊಂದಿಗೆ ಅದೇ ಊರಿನವರಾದ ಪರಿಚಿತರೊಬ್ಬರು ತಮ್ಮ ಮಗನನ್ನೂ ಕರೆದುಕೊಂಡು ಬಂದರು. ದೇವರಿಗೆ ಅಹವಾಲು ಸಲ್ಲಿಸಿದ ನಂತರ ದೇವಸ್ಥಾನದಲ್ಲೇ ಊಟ ಮಾಡಿಕೊಂಡು ಹೊರಡುವುದೆಂದು ನಿಶ್ಚಯಿಸಲಾಯಿತು. ನಮ್ಮೊಂದಿಗೆ ಬಂದಿದ್ದ ಅದೇ ಊರಿನವರು ನಮ್ಮಂತಹ ಶೂದ್ರರಿಗೂ ಪ್ರಸಾದ ದಯಪಾಲಿಸುವ ಊಟದ ಮನೆಗೆ ಕರೆದುಕೊಂಡು ಹೋಗಲಾರಂಭಿಸಿದರು. ಅವರೊಂದಿಗಿದ್ದ ಮಗ, 'ಪಪ್ಪಾ ನಾವು ಇವತ್ಯಾಕೆ ಇಲ್ಲಿಗೆ ಊಟ ಮಾಡೋಕೆ ಬರ್ತಿದ್ದೀವಿ?' ಅಂತ ಪ್ರಶ್ನಿಸಿದ.

'ಇವ್ರು ನಮ್ಮ ಹಾಗೆ ಪ್ಯೂರ್ ಬ್ರಾಹ್ಮಿನ್ ಅಲ್ಲ ಪುಟ್ಟ ಅದ್ಕೆ' ಅಂತಂದು ತಮ್ಮ ಮಗನ ಗೊಂದಲ ಪರಿಹರಿಸುವ ಪ್ರಯತ್ನ ಮಾಡಿದರು.

ಪ್ರಸಾದವೆಂದು ಕರೆಯಲಾದ ಊಟ ಮಾಡುವಾಗ ಅವರಂದರು, 'ಇದೇ ಫಸ್ಟು ನಾವಿಲ್ಲಿ ಊಟ ಮಾಡ್ತಿರೋದು. ನಮ್ಗೆ ಅಂತ ಇರೋ ಊಟದ ಹಾಲ್ನಲ್ಲಿ ಇಲ್ಲಿಗಿಂತ ಚೆನ್ನಾಗಿರುತ್ತೆ...'

ಅವರ ಪಕ್ಕದಲ್ಲೇ ಕುಳಿತಿದ್ದ ಎಂಟ್ಹತ್ತು ವರ್ಷದ ಮಗ ನಮ್ಮನ್ನೇ ದಿಟ್ಟಿಸುತ್ತಿದ್ದ. ಅವನೊಳಗೆ ನಮ್ಮ ಕುರಿತು ಮೂಡಲಾರಂಭಿಸಿದ್ದು ಅನುಕಂಪವೋ ಅಸಹನೆಯೋ ಗೌರವವೋ ಅಗೌರವವೋ ತಿಳಿಯುವ ಪ್ರಯತ್ನ ಮಾಡುವ ಮನಸ್ಸಾಗಲಿಲ್ಲ.

(ಮೇ 2016, ಪ್ರಜಾವಾಣಿ)



# ಆತ್ಮವಂಚನೆಯ ಸ್ವಚ್ಛ ಭಾರತ!

ಹದಿನೈದು ವರ್ಷಗಳಿಂದಲೂ ನೆರೆಹೊರೆಯವರಾಗಿರುವ ಒಬ್ಬರು ಅಮ್ಮನೊಂದಿಗೆ ಕೆಲ ಹೊತ್ತು ಹರಟುವ ಸಲುವಾಗಿ ಮನೆಗೆ ಬಂದಿದ್ದರು. ಎಂದಿನ ಅಭ್ಯಾಸದಂತೆ ಮನೆಗೆ ಬಂದ ಅತಿಥಿಯೊಂದಿಗೆ ಒಂದಷ್ಟು ಮಾತನಾಡಿದ ಅಮ್ಮ, 'ಕಾಫಿ ಮಾಡ್ತೀನಿ ತಡೀರಿ' ಅಂತ ಅಡುಗೆ ಕೋಣೆಯತ್ತ ಹೊರಡಲು ಅನುವಾದಾಗ ಅವರನ್ನು ತಡೆದ ನೆರೆಹೊರೆಯ ಆಂಟಿ, 'ನಾನು ಬೇರೆಯವ್ರ ಮನೇಲಿ ಕಾಫಿ-ಟೀ ಏನೂ ಕುಡಿಯಲ್ಲ ಕಣ್ರಿ, ಬೇಜಾರ್ ಮಾಡ್ಕೊಬೇಡಿ' ಅಂತಂದರು. ಅವರ ಬಗ್ಗೆ ಅದಾಗಲೇ ತಿಳಿದುಕೊಂಡಿದ್ದ ನಮ್ಮಮ್ಮನೂ ವಿಷಯ ಲಂಬಿಸಲು ಹೋಗಲಿಲ್ಲ.

ನಾವು 'ಅಯ್ಯನವರ ಮನೆ' ಎಂದೇ ಗುರುತಿಸುವ ಆ ಆಂಟಿಯ ಮನೆಯವರು ಗೃಹಪ್ರವೇಶ, ಮದುವೆ ಇನ್ನಿತರೆ ಸಮಾರಂಭಗಳಲ್ಲೂ ಊಟ ಮಾಡದೇ ಹೋಗುತ್ತಿದ್ದರು. ಆದರೆ, ಪರಿಚಿತರು ಆಹ್ವಾನಿಸುವ ಎಲ್ಲಾ ಕಾರ್ಯಕ್ರಮಗಳಿಗೂ ತಪ್ಪದೇ ಹಾಜರಾಗುತ್ತಿದ್ದರು. ಈಗೀಗ ಆ ಮನೆಯ ಗಂಡು ಕುಲವೆಲ್ಲ ಎಲ್ಲೆಡೆಯೂ ತಿನ್ನುವ ಅಭ್ಯಾಸ ರೂಢಿಸಿಕೊಂಡಿರುವುದು ಹಾಗು ಹೆಂಗಸರು ಇನ್ನೂ ತಮ್ಮ ಆಚಾರ-ವಿಚಾರ ಪಾಲಿಸಿಕೊಂಡು ಹೋಗುತ್ತಿರುವುದು ನಮ್ಮ ಏರಿಯಾದ ಮಟ್ಟಿಗೆ ಎಲ್ಲರಿಗೂ ತಿಳಿದ ವಿಚಾರವೇ.

ಮನೆ ಹೊರಗೆ ತಿನ್ನುವಾಗ ಹುಟ್ಟಿನೊಂದಿಗೆ ಅಮರಿಕೊಂಡ ಸ್ವಜಾತಿ ಶ್ರೇಷ್ಠತೆಯ ವ್ಯಸನಕ್ಕೆ ಒಳಗಾದವರಂತೆ ತೋರುವ ಅಯ್ಯನವರ ಮನೆಯವರು, ಇಂದು ನನಗೆ ಬೇರೆಯದೇ ಕಾರಣಕ್ಕಾಗಿ ನಾವು ಅನುಸರಿಸಬೇಕಿದ್ದ ಮಾದರಿಯೊಂದನ್ನು ನಮ್ಮೆದುರು ತೆರೆದಿಟ್ಟಿದ್ದ ಅನುಕರಣೀಯ ವ್ಯಕ್ತಿಗಳಾಗಿ ತೋರುತ್ತಿದ್ದಾರೆ.

ಆಗೆಲ್ಲ ನಮ್ಮ ಮನೆಯ ಶೌಚಾಲಯ ತ್ಯಾಜ್ಯ ಶೇಖರಿಸಿಕೊಳ್ಳುತ್ತಿದ್ದ ಗುಂಡಿ ತುಂಬಿದರೆ, ನಾವು ಅದನ್ನು ತೆಗೆಯುವುದನ್ನೇ ವೃತ್ತಿಯಾಗಿಸಿಕೊಂಡವರನ್ನು ಸಂಪರ್ಕಿಸುತ್ತಿದ್ದೆವು. ನಮ್ಮದೇ ಮಲ-ಮೂತ್ರ ತುಂಬಿಕೊಂಡಿದ್ದರೂ ನಮ್ಮ ಪಾಲಿಗೆ ಕಣ್ಣೆತ್ತಿ ನೋಡಲೂ ಅಸಹ್ಯವಾಗುತ್ತಿದ್ದ ಶೌಚ ಗುಂಡಿಗೆ ಅವರನ್ನು ಇಳಿಸಿ, ಮದ್ಯ ಸೇವಿಸಿ ಈ ಕೆಲಸ ಮಾಡುವ ಅವರು ನಮ್ಮಂತೆ ಮನುಷ್ಯರೇ ಅಲ್ಲವೇನೊ ಎಂಬಷ್ಟು ನಿಕೃಷ್ಟವಾಗಿ ಅವರೊಂದಿಗೆ ವರ್ತಿಸುತ್ತಿದ್ದೆವು. ನಮ್ಮ ಏರಿಯಾದ ಬಹುತೇಕ ಮಂದಿ ತಮ್ಮ ಮನೆ ಶೌಚ ಗುಂಡಿ ತುಂಬಿದಾಗಲೆಲ್ಲ ಮಾಡುತ್ತಿದ್ದುದು ಇದನ್ನೇ. ಆದರೆ ಮೇಲೆ ಉದಾಹರಿಸಿದ ಅಯ್ಯನವರ ಮನೆಯ ಗಂಡಸರು ಮಾತ್ರ ತಮ್ಮ ಮನೆಯ ಶೌಚ ಗುಂಡಿ ತುಂಬಿದರೆ, ಅದರೊಳಗಿನ ತ್ಯಾಜ್ಯವನ್ನು ತಾವೇ ತೆಗೆದು ಹೊರ ಹಾಕುತ್ತಿದ್ದರು. ಅಂದು ಈ ವಿಚಾರದಲ್ಲಿ ನಮಗೆಲ್ಲ ಇರುವುದರಲ್ಲೇ ಉತ್ತಮ ಮಾದರಿಯೊಂದನ್ನು ಅವರು ಎತ್ತಿ ಹಿಡಿದು ತೋರುತ್ತಿದ್ದರೆ, ನಾವೆಲ್ಲ ಅವರ ಈ ದುಸ್ಸಾಹಸ ಕಂಡು ಗೇಲಿ ಮಾಡುತ್ತಿದ್ದೆವು. ದುಡ್ಡು ಉಳಿಸಲೆಂದೇ ಅವರು ಸಭ್ಯರಾದ ನಾವೆಲ್ಲ ಮಾಡಬಾರದ ಕೆಲಸವನ್ನು ಮಾಡುತ್ತಿದ್ದಾರೆಂದು ದೂಷಿಸು ತ್ತಿದ್ದೆವು. ಶೌಚ ಗುಂಡಿ ಸ್ವಚ್ಛಗೊಳಿಸಲು ಯಂತ್ರ ಬಳಸುವ ವಿಚಾರ ನಮಗೆಲ್ಲ ಅಪರಿಚಿತವೇ ಆಗಿದ್ದ ಕಾಲದಲ್ಲಿ, ಕೊನೆ ಪಕ್ಷ ನಮ್ಮ ಮನೆ ಶೌಚ ಗುಂಡಿ ನಾವೇ ಶುಚಿಗೊಳಿಸಿಕೊಳ್ಳುವುದು ಮನುಷ್ಯರಾಗಿದ್ದುಕೊಂಡು ನಾವು ಮಾಡಬಹುದಾಗಿದ್ದ ಗೌರವಯುತ ಕೆಲಸಗಳಲ್ಲೊಂದು ಎಂದು ಅನಿಸಿಯೇ ಇರಲಿಲ್ಲ. ಅದೂ ಅಲ್ಲದೇ ಕೆಳ ಜಾತಿಯವರಷ್ಟೇ ಮಾಡುತ್ತಿದ್ದ, ಈಗಲೂ ಅಲ್ಲಲ್ಲಿ ಮಾಡುವ ಈ ಕಸುಬನ್ನು ಬೆರಳೆಣಿಕೆಯಷ್ಟು ಶೂದ್ರರು ಕೂಡ ಮಾಡಲಾರಂಭಿಸಿದ್ದನ್ನು ಗಮನಿಸಿ, 'ಇವ್ರಿಗೆಲ್ಲ ಏನಾಗಿದೆ? ಕುಡಿಯೋಕೆ ದುಡ್ಡು ಸಿಗುತ್ತೆ ಅಂತ ನಮ್ಮವ್ರು ಕೂಡ ಈ ಕೆಲ್ಸ ಮಾಡೋಕೆ ಶುರುವಾದ್ರಲ್ಲ' ಅಂತ ಅಸಹನೆಯಿಂದಲೇ ಹುಬ್ಬೇರಿಸುತ್ತಿದ್ದೆವು. ಇಂದು

ನಾವು ವಾಸಿಸುತ್ತಿರುವ ಊರಲ್ಲಿ ಒಳಚರಂಡಿ ವ್ಯವಸ್ಥೆ ಇರುವುದಕ್ಕೋ ಅಥವಾ ಮನುಷ್ಯರಿಂದ ಮಲ ಹೊರಿಸುವ ಕೆಲಸ ಮಾಡಿಸುವುದು ಶಿಕ್ಷಾರ್ಹ ಅಪರಾಧವೆಂಬ ಅರಿವು ಮೂಡಿರುವ ಕಾರಣಕ್ಕೋ ಇಲ್ಲ ಈ ಕೆಲಸಕ್ಕೂ ಯಂತ್ರ ದೊರೆಯುತ್ತಿರುವುದರಿಂದಲೋ ಏನೋ ಹಣ ಉಳಿಸುವ ಕಾರಣಕ್ಕಾಗಿ ಮನುಷ್ಯರಿಂದ ಶೌಚ ಗುಂಡಿ ತ್ಯಾಜ್ಯ ವಿಲೇವಾರಿ ಮಾಡಿಸುವುದು ಗಣನೀಯವಾಗಿ ತಗ್ಗಿದೆ.

ಇಂದಿಗೂ ಜಾತಿ ಶ್ರೇಷ್ಠತೆಯ ಮನೋಭಾವದಿಂದಾಗಿ ನಮ್ಮಂತಹ ಶೂದ್ರರ ಮನೆಯಲ್ಲಿ ಊಟ ಮಾಡುವುದಿರಲಿ, ಕಾಫಿ ಕುಡಿಯಲೂ ನಿರಾಕರಿಸುವ ಮನೆಯವರೇ ತಮ್ಮ ಶೌಚ ಗುಂಡಿಯನ್ನು ತಾವೇ ಶುಚಿಗೊಳಿಸುವ ಮೂಲಕ ನಮಗೆಲ್ಲ ಮಾದರಿಯಾಗಿದ್ದರು ಎನ್ನುವ ಜ್ಞಾನೋದಯವಾಗಲು ಕಾರಣವಾದದ್ದು ಇತ್ತೀಚೆಗೆ ಇಂಗ್ಲಿಷ್ ನ್ಯೂಸ್ ಚಾನೆಲ್ ಒಂದರಲ್ಲಿ ಪ್ರಸಾರವಾದ ಮ್ಯಾಗ್ಸೆಸೆ ಪ್ರಶಸ್ತಿ ಪುರಸ್ಕೃತ ಬೆಜವಾಡ ವಿಲ್ಸನ್ ಅವರ ಸಂದರ್ಶನ.

'ಸ್ವಚ್ಛ ಭಾರತ' ಕಟ್ಟುವ ಹುಮ್ಮಸ್ಸಿನಲ್ಲಿ ನಾವು ಕಡೆಗಣಿಸಿರುವ ಕೆಲವು ಪ್ರಮುಖ ಅಂಶಗಳತ್ತ ಅವರು ಬೊಟ್ಟು ಮಾಡುತ್ತಿದ್ದರು. ಎಲ್ಲೆಡೆಯೂ ಶೌಚಾಲಯ ಕಟ್ಟುವುದು ಮತ್ತದನ್ನು ಬಳಸುವಂತೆ ಜನರ ಮನವೊಲಿಸುವುದೇ ಮಹೋನ್ನತ ಕೆಲಸವೆಂಬಂತೆ ಪ್ರಚಾರ ನಡೆಯುತ್ತಿರುವ ಹೊತ್ತಲ್ಲಿ, ಆ ಶೌಚಾಲಯಗಳ ತ್ಯಾಜ್ಯ ವಿಲೇವಾರಿಗೆ ನಾವು ಕೈಗೊಳ್ಳಲಿರುವ ಕ್ರಮಗಳಾದರೂ ಯಾವುವು? ಹೆಚ್ಚೆಚ್ಚು ಶೌಚಾಲಯಗಳ ನಿರ್ಮಾಣವಾದಂತೆ ಮನುಷ್ಯರಿಂದ ಮಲ ಹೊರಿಸುವ ಪದ್ಧತಿಗೂ ಮತ್ತಷ್ಟು ಜೀವ ಬರುವುದಿಲ್ಲವೇ ಎಂಬ ಗಂಭೀರ ಪ್ರಶ್ನೆಯನ್ನು ಅವರು ಎತ್ತುತ್ತಿದ್ದಾರೆ. ಇದುವರೆಗೂ ನಾವು ಗಮನಿಸಿರುವ 'ಸ್ವಚ್ಛ ಭಾರತ'ದ ಜಾಹಿರಾತುಗಳು ಮುಟ್ಟದ ಮುಖ್ಯ ವಿಚಾರವೊಂದು ಇದೀಗ ಹೆಚ್ಚು

ಪ್ರಸ್ತುತವಾಗುತ್ತಿದೆ. ಬೀದಿಯಲ್ಲಿ ಬಿದ್ದಿರುವ ತ್ಯಾಜ್ಯವನ್ನು ಸಂಗ್ರಹಿಸಿ ಕಸದ ಬುಟ್ಟಿಗಳನ್ನು ತುಂಬಿಸಿದರೆ ಸಾಕೇ? ಹಾಗೆ ಸಂಗ್ರಹವಾಗುವ ತ್ಯಾಜ್ಯದ ವಿಲೇವಾರಿ ಕುರಿತೂ ಸ್ವಚ್ಛ ಭಾರತದ ಜಾಹಿರಾತುಗಳು ಮಾತನಾಡಬೇಕಲ್ಲವೇ? ಇದೇ ಪ್ರಶ್ನೆಯನ್ನು ಶೌಚಾಲಯ ನಿರ್ಮಿಸುವ ವಿಚಾರಕ್ಕೂ ಅನ್ವಯಿಸಬಹುದು. ಶೌಚಾಲಯ ತ್ಯಾಜ್ಯ ವಿಲೇವಾರಿಗೆ ಸಂಬಂಧಿಸಿದಂತೆ ಪುಟ್ಟ ಹಳ್ಳಿಗಳಿಂದಿಡಿದು ಮಹಾನಗರಗಳವರೆಗೆ ಎಲ್ಲೆಡೆಗೂ ಸಲ್ಲಬಹುದಾದ ಮಾದರಿಯೊಂದನ್ನು ಜನರೆದುರು ಇಡುವ ಕೆಲಸವನ್ನು ದೇಶಕ್ಕೆ ಸ್ವಚ್ಛತೆಯ ಪೋಷಾಕು ತೊಡಿಸಲು ಹೊರಟಿರುವವರು ಮಾಡುತ್ತಿದ್ದಾರೆಯೇ? ಮೈಗೆ ಕಸ ಸೋಕದಂತೆ ಪೊರಕೆ ಹಿಡಿದು ಕ್ಯಾಮೆರಾಗಳಿಗೆ ಪೋಸು ನೀಡುವ ಮಂದಿ, ಸ್ವಚ್ಛ ಭಾರತದ ಅಸಲಿ ರಾಯಭಾರಿಗಳಾದ ಪೌರ ಕಾರ್ಮಿಕರು, ಸಫಾಯಿ ಕರ್ಮಚಾರಿಗಳ ಜೀವನ ಮಟ್ಟ ಸುಧಾರಿಸುವ ಕಾಳಜಿ ಹೊಂದಿರುವರೇ?

ಸಮಸ್ಯೆಯ ಬೇರಿಗೆ ಕೈ ಹಾಕುವ ಉಸಾಬರಿಗೆ ಹೋಗದೆ, ಮೇಲಷ್ಟೇ ತೇಪೆ ಹಾಕುತ್ತ ಹೋಗುವುದು ದೂರಗಾಮಿ ಪರಿಣಾಮಗಳತ್ತ ಕಣ್ಣೆತ್ತಿಯೂ ನೋಡಲು ಬಯಸದ ಮನಸ್ಥಿತಿಯೊಂದರ ಹುಳುಕನ್ನು ಎತ್ತಿ ಹಿಡಿಯುವುದಿಲ್ಲವೇ? ಇಡೀ ಭಾರತವನ್ನು ಸ್ವಚ್ಛ ಮಾಡುವ ಉಮೇದಿನೊಂದಿಗೆ ಮುನ್ನುಗ್ಗುವ ಮುನ್ನ ನಮ್ಮ ಮನಸ್ಸುಗಳನ್ನೂ ಶುಚಿಗೊಳಿಸಿಕೊಳ್ಳುವ ಜರೂರತ್ತು ಇರುವಂತೆ ತೋರುವುದಿಲ್ಲವೇ? ಭಾರತದ ಬೀದಿಗಳಷ್ಟೇ ಸ್ವಚ್ಛವಾದರೆ ಸಾಕೇ? ಮನಸ್ಸುಗಳಲ್ಲಿ ತುಂಬಿರುವ ತ್ಯಾಜ್ಯದ ವಿಲೇವಾರಿಯೂ ಆಗಬೇಕಲ್ಲವೇ?

(ಅಕ್ಟೋಬರ್ 2016, ಗೌರಿ ಲಂಕೇಶ್)



## ಅಂಬೇಡ್ಕರ್ ಫೋಟೊ ಮತ್ತು ಅಸಹನೆಯ ಭಾವಚಿತ್ರ

ನಾನು ಕೆಲಸ ನಿರ್ವಹಿಸುತ್ತಿದ್ದ ಕಾಲೇಜಿನ ಸ್ಟಾಫ್ ರೂಮ್ನಲ್ಲಿ ನನ್ನೊಂದಿಗೆ ಕ್ಯಾಬಿನ್ ಹಂಚಿಕೊಂಡಿದ್ದ ವ್ಯಕ್ತಿಯೊಬ್ಬರು ತಾವು ಕೂರುವ ಸ್ಥಳದ ಬಳಿ ಅಂಬೇಡ್ಕರ್ ಅವರ ಪುಟ್ಟ ಭಾವಚಿತ್ರವೊಂದನ್ನು ಇಟ್ಟುಕೊಂಡಿದ್ದರು. ಅದನ್ನು ನಾನೂ ಮೊದಲೇ ಗಮನಿಸಿದ್ದೆ. ಒಳಗೊಳಗೇ ಅವರ ನಿಲುವು ಮೆಚ್ಚಿಕೊಂಡಿದ್ದೆ.

ಹೀಗೆ ಲೋಕಾಭಿರಾಮವಾಗಿ ಹರಟಲು ನಮ್ಮ ಕ್ಯಾಬಿನ್ಗೆ ಬಂದ ಉಳಿದ ಕೆಲ ಸಹೋದ್ಯೋಗಿಗಳು ಅದು ಇದು ಮಾತಾಡುತ್ತ ಕಾಲ ನೂಕುವ ವೇಳೆಯಲ್ಲಿಯೇ ಅಲ್ಲಿದ್ದ ಅಂಬೇಡ್ಕರ್ ಭಾವಚಿತ್ರ ಗಮನಿಸಿ ಹುಬ್ಬೇರಿಸಿ ವ್ಯಂಗ್ಯದ ನಗೆ ಬೀರಿದರು. ಆನಂತರ ಒಂದಷ್ಟು ಕಮೆಂಟುಗಳನ್ನು ಬಿಸಾಕಿದರು.

'ಓಹ್... ಅಂಬೇಡ್ಕರ್ ಫೋಟೋ... ಇವ್ರು ಇಟ್ಕೊಬೇಕಾದ್ದೆ... ಅಂಬೇಡ್ಕರ್ ಇದ್ದಿದ್ಕೆ ಅಲ್ವಾ ಇವ್ರಿಗೆ ಕೆಲ್ಸ ಸಿಕ್ಕಿರೋದು...'

'ಅವ್ರು ನಮ್ ಕಾನೂನುಗಳ್ನ ಬರುದ್ರು ಅನ್ನೋ ಕಾರಣಕ್ಕೆ ನಾವೂ ಅಂಬೇಡ್ಕರ್ ಅವ್ರಿಗೆ ಗೌರವ ಕೊಡ್ಬೇಕು...'

ಹೀಗೆಲ್ಲ ಆ ಕ್ಷಣಕ್ಕೆ ತಮಗನಿಸಿದ್ದನ್ನೆಲ್ಲ ಹೇಳಿದವರು, ನೀನು ಏನ್ ಹೇಳ್ತೀಯಪ್ಪ ಎನ್ನುವ ಪ್ರಶ್ನೆಯೊಂದಿಗೆ ನನ್ನತ್ತ ದೃಷ್ಟಿ ನೆಟ್ಟರು.

'ನಾನೂ ಅಂಬೇಡ್ಕರ್ ಅಭಿಮಾನಿ ಕಣ್ರಪ್ಪ... ಅವ್ರ ಫೋಟೋ ನಮ್ ಕ್ಯಾಬಿನ್ನಲ್ಲಿರೋದು ನಂಗೂ ಖುಷಿನೇ...' ಅಂತಂದು ಸುಮ್ಮನಾದೆ. ಅವರೂ ಮತ್ತೊಮ್ಮೆ ವ್ಯಂಗ್ಯದ ನಗು ಬೀರಿ ವಿಷಯಾಂತರ ಮಾಡಿದರು.

ಆದರೆ, ವ್ಯಕ್ತಿಯೊಬ್ಬರು ತಮ್ಮ ಬಳಿ ಅಂಬೇಡ್ಕರ್ ಫೋಟೋ ಇಟ್ಟುಕೊಳ್ಳುವುದನ್ನೂ ಕುಹಕದ ಕಣ್ಣಿನಿಂದ ನೋಡಬೇಕೆ? ಎನ್ನುವ ಬೇಸರ ನನ್ನೊಳಗೆ ಮಿಸುಕಾಡಲಾರಂಭಿಸಿತು. ಅದರೊಂದಿಗೆ ಉಳಿದ ಕ್ಯಾಬಿನ್ಗಳಲ್ಲಿ ಯಾರ್ಯಾರ ಫೋಟೋಗಳಿವೆ ಎಂಬ ಕುರಿತು ಪರಿಶೀಲಿಸಲಾರಂಭಿಸಿದೆ.

ಕೆಲವರು ವಿಶ್ವೇಶ್ವರಯ್ಯ, ಶಂಕರಾಚಾರ್ಯ, ತಮ್ಮ ಮನಸ್ಸಿಗೆ ಆಪ್ತವಾದ ದೇವರುಗಳ ಫೋಟೋಗಳನ್ನು ತಮ್ಮ ತಮ್ಮ ಕ್ಯಾಬಿನ್ನಲ್ಲಿ ಇಟ್ಟುಕೊಂಡಿರುವುದು ಕಣ್ಣಿಗೆ ಬಿತ್ತು. ಆ ಕುರಿತು ಯಾರಾದರೂ ಆಕ್ಷೇಪ ವ್ಯಕ್ತಪಡಿಸಿದ್ದರೆ ಅಥವಾ ವ್ಯಂಗ್ಯದ ಮಾತುಗಳನ್ನಾಡಿದ್ದರೆ ಎಂಬುದನ್ನು ನನ್ನ ಅದುವರೆಗಿನ ಗಮನಿಸುವಿಕೆಯ ಆಧಾರದಲ್ಲಿ ಪರಿಶೀಲಿಸಲಾರಂಭಿಸಿದೆ. ಒಂದೇ ಒಂದು ನಿದರ್ಶನವೂ ಕಣ್ಣೆದುರು ಹಾದು ಹೋಗಲಿಲ್ಲ.

ದೇವರು, ದೇವಮಾನವರ ಫೋಟೋಗಳನ್ನು ತಮ್ಮೊಂದಿಗೆ ಇಟ್ಟುಕೊಂಡರೆ ಆಕ್ಷೇಪ ಎತ್ತದವರು, ಸಹೋದ್ಯೋಗಿಯೊಬ್ಬರು ಅಂಬೇಡ್ಕರ್ ಭಾವಚಿತ್ರವೊಂದನ್ನು ತಮ್ಮ ಬಳಿ ಇಟ್ಟುಕೊಂಡದ್ದನ್ನೇ ನೆಪವಾಗಿಸಿಕೊಂಡು ಕುಹಕವಾಡಿದ್ದು ಒಂದಷ್ಟು ಚಿಂತಿಸುವಂತೆ ಮಾಡಿತು. ತಮ್ಮೊಳಗಿನ ಜಾತಿ ಆಧಾರಿತ ಅಸಹನೆಯನ್ನು ನೇರವಾಗಿ ತೋರ್ಪಡಿಸಿಕೊಳ್ಳದೆ, ಅಂಬೇಡ್ಕರ್ ಫೋಟೋ ಮುಂದಿಟ್ಟುಕೊಂಡು ಹೀಗೆಲ್ಲ ಕಮೆಂಟುಗಳನ್ನು ಬಿಸಾಕುವ ಮೂಲಕ ಹೊರಹಾಕುತ್ತಿದ್ದಾರೆಂದು ಗೊಣಗಿಕೊಂಡೆ.

ಜಾತಿ ಆಧಾರಿತ ಮೀಸಲಾತಿಯಿಂದ ಶಿಕ್ಷಣ ಮತ್ತು ಉದ್ಯೋಗದ ವಿಚಾರದಲ್ಲಿ ತಾವು ಅವಕಾಶ ವಂಚಿತರಾಗಿದ್ದೇವೆ ಎಂಬುದನ್ನು ಸಾರಲು ಸಿಗುವ ಸಣ್ಣ ಅವಕಾಶವನ್ನೂ ಮಿಸ್ ಮಾಡಿಕೊಳ್ಳಲು ಬಯಸದ ಕೆಲವರಿಗೆ, ತಮ್ಮ ವಿಚಾರ

ಸರಣಿ ಮಂಡಿಸಲು ಅಂಬೇಡ್ಕರ್ ಅವರ ಒಂದು ಭಾವಚಿತ್ರ ಕೂಡ ನೆಪವಾಗಬಲ್ಲದು.

ಪರಿಶಿಷ್ಟ ಜಾತಿ ಮತ್ತು ಪಂಗಡಗಳನ್ನು ಒಳಗೊಂಡಂತೆ ಮೀಸಲಾತಿಯಿಂದ ಹೆಚ್ಚು ಅವಕಾಶ ಪಡೆಯುತ್ತಿರುವವರ ಕುರಿತು ನಿಮ್ಮೊಳಗಿರುವ ಅಸಹನೆ, ತಾತ್ಸಾರಕ್ಕೆ ಕೇವಲ 'ಮೀಸಲಾತಿ'ಯೊಂದೇ ಕಾರಣವಾಗಿದ್ದರೆ, ಮದುವೆಯಾಗಲು, ಬಾಡಿಗೆಗೆ ಮನೆ ಕೊಡಲು 'ಜಾತಿ'ಯ ಜಪ ಮಾಡುವುದೇಕೆ ಎಂದು ಪ್ರಶ್ನಿಸಿದರೆ, ಅದೆಲ್ಲ ತಮ್ಮ ವೈಯಕ್ತಿಕ ಬದುಕಿಗೆ ಸಂಬಂಧಿಸಿದ್ದು ಅಂತಷ್ಟೇ ಚುಟುಕಾಗಿ ಉತ್ತರಿಸಿ, ಅವರ ದೃಷ್ಟಿಯಲ್ಲಿ ಸಾರ್ವತ್ರಿಕವಾಗಿ ಚರ್ಚಿಸಬಹುದಾದ 'ಮೀಸಲಾತಿ'ಯತ್ತ ಮತ್ತೆ ಕೈ ತೋರಿಸುತ್ತಾರೆ.

(ಮಾರ್ಚ್ 2016, ಗೌರಿ ಲಂಕೇಶ್)



# ಬಣ್ಣದ ಬೆನ್ನೇರಿ...

ಮೊನ್ನೆ ಗೆಳೆಯನೊಂದಿಗೆ ಹರಟುತ್ತಿದ್ದೆ. ಯಾವ್ಯಾವುದೋ ವಿಷಯಗಳೆಲ್ಲ ನಮ್ಮ ಮಾತಿನ ನಡುವೆ ತೂರಿ ಹೋದವು. ಮಾತು ಪ್ರೇಮ ಮತ್ತು ವಿವಾಹದೆಡೆಗೆ ಹೊರಳಿತು. ಗೆಳೆಯ ಕೇಳಿದ, 'ನೀನು ಲವ್ ಮಾಡ್ತಿರೋ ಹುಡ್ಗಿ ಬೆಳ್ಳಗಿದ್ದಾಳೋ ಕಪ್ಪಗಿದ್ದಾಳೋ?' ಅಂತ. 'ಕಪ್ಪಗಿದ್ದಾಳೆ... ಹ್ಲಾ... ತೀರಾ ಕಪ್ಪೇನಲ್ಲ, ಮೀಡಿಯಂ ಡಾರ್ಕು' ಎಂದೆ. 'ಹಾಗಾದ್ರೆ ನಾನು ಬೆಳ್ಳಗಿರುವವಳನ್ನೇ ಮದ್ವೆ ಆಗ್ತೀನಿ' ಅಂದ. ನಾನು ನಕ್ಕು ಸುಮ್ಮನಾದೆ.

ಬಹುತೇಕರ ಅಭಿಪ್ರಾಯದಂತೆ ನಾನು ಬೆಳ್ಳಗಿದ್ದೀನಿ, ನನ್ನೊಂದಿಗೆ ಹರಟುತ್ತಿದ್ದ ಗೆಳೆಯ ಕಪ್ಪಗಿದ್ದಾನೆ. ಬೆಳ್ಳಗಿರುವ ಹುಡುಗ ಬೆಳ್ಳಗಿರುವ ಹುಡುಗಿಯನ್ನ, ಕಪ್ಪಗಿರುವವನು ಕಪ್ಪಗಿರುವ ಹುಡುಗಿಯನ್ನ ಮದ್ವೆ ಆದ್ರೆ ಜೋಡಿ ಚೆನ್ನಾಗಿರುತ್ತೆ ಅನ್ನೋ ಅಭಿಪ್ರಾಯ ಬಹುಶಃ ಅವನ ನೆತ್ತಿಗೇರಿತ್ತೆಂದು ಕಾಣುತ್ತದೆ. ಹಾಗಾಗಿ ಹಾಗೆಂದಿರಬಹುದೆಂದುಕೊಂಡೆ.

ಚರ್ಮದ ಬಣ್ಣ ನಿರ್ಧರಿಸುವುದು ದೇಹದಲ್ಲಿರುವ 'ಮೆಲಾನಿನ್' ಎಂಬ ಪಿಗ್ಮೆಂಟ್ ಅನ್ನೋದು ತಿಳಿದಾಗಿನಿಂದಲೂ ಈ ಚರ್ಮದ ಬಣ್ಣಕ್ಕೆ ಸಂಬಂಧಿಸಿದ ಚರ್ಚೆಗಳೆಲ್ಲವೂ ವಾಸ್ತವವನ್ನು ಮಾರುದೂರಕ್ಕೆ ಅಟ್ಟುತ್ತಿರುವಂತೆಯೇ ತೋರುತ್ತವೆ.

ಅಷ್ಟಕ್ಕೂ ಯಾರು ಸುಂದರ? ಬೆಳ್ಳಗಿರುವವರಾ, ಕಪ್ಪಗಿರುವವರಾ? ಕಪ್ಪಗಿದ್ದರೂ ಲಕ್ಷಣವಾಗಿದ್ದಾಳೆಂದು ಹೇಳಲು 'ಕೃಷ್ಣಸುಂದರಿ' ಎನ್ನುತ್ತೇವಾದರೂ, ಸುಂದರವಾಗಿರುವುದೆಂದರೆ ಬೆಳ್ಳಗಿರುವುದೆಂಬ ಭ್ರಮೆ ನಮ್ಮೊಳಗೆ ಜಮೆಯಾಗಿ

ಬಿಟ್ಟಿದೆ. ಈ 'ಲಕ್ಷಣ'ವಾಗಿರುವುದೆಂದರೆ ಏನು? ಅದರ ಗುಣಲಕ್ಷಣಗಳೇನು? ಅವನ್ನು ನಿರ್ಧರಿಸಿದವರು ಯಾರು? ಅನುಸರಿಸಿದ ಮಾನದಂಡಗಳಾದರೂ ಯಾವುವು? ಹೀಗೆ ಎಷ್ಟೆಲ್ಲ ಪ್ರಶ್ನೆಗಳನ್ನು ಕೇಳಿಕೊಳ್ಳಬಹುದು ಅಥವಾ ಕೇಳಲೂಬಹುದು?

ಎಲ್ಲರಿಗೂ ಬೆಳ್ಳಗಾಗುವ ಹುಮ್ಮಸ್ಸು. ಬೆಳ್ಳಗಿರುವವರೂ ತಮ್ಮ ಈಗಿರುವ ಚರ್ಮದ ಬಣ್ಣ ಉಳಿಸಿಕೊಂಡು ಮತ್ತಷ್ಟು ಕಾಂತಿಯುತವಾಗಿಸಿಕೊಳ್ಳಲು ತರಹೇವಾರಿ ಕಸರತ್ತುಗಳನ್ನು ನಡೆಸುತ್ತಾರೆ.

'ಲಕ್ಷಣ'ವೆಂಬ ಸಂಗತಿ ಒಂದು ಹಂತದವರೆಗಿನ ಕಪ್ಪು ತ್ವಚೆಯನ್ನು 'ಸ್ವೀಕಾರಾರ್ಹ' ವ್ಯಾಪ್ತಿಗೆ ತಂದು ನಿಲ್ಲಿಸುತ್ತದೆಯಾದರೂ, ಯಾರೂ ತಾವು ಕಪ್ಪಗಾಗುವ ಸಲುವಾಗಿ ಯಾವುದೇ ಕ್ರೀಮ್ ಹಚ್ಚಿಕೊಳ್ಳುವುದಿಲ್ಲ.

ತೀರಾ ಬೆಳ್ಳಗಿರುವವರಿಗೆ 'ಬಿಳಿ ಜಿರಲೆ', 'ಬಿಳುಚ್ಕಂದವ್ರೆ' ಅನ್ನುತ್ತಾರಾದರೂ, ಇವೂ ಕೂಡ ಹೊಗಳಿಕೆಯ ರೂಪದಲ್ಲೇ ಹೊರಬೀಳುವುದುಂಟು ಅಥವಾ ಹಾಗೆ ಸ್ವೀಕರಿಸುವವರುಂಟು!

ಬೆಳ್ಳಗಿರುವುದೆಲ್ಲಾ ಹಾಲಲ್ಲವೆಂದು ಒಪ್ಪುವ ನಾವೂ, 'ಹಾಲಿನಂತಹ ಬಿಳುಪುಳ್ಳ ತ್ವಚೆ ನಿಮ್ಮದಾಗಬೇಕೆ? ಹಾಗಾದ್ರೆ ಈ ಕ್ರೀಂ ಬಳಸಿ' ಎಂಬ ಜಾಹಿರಾತಿಗೆ ಮಾರು ಹೋಗುತ್ತೇವೆ.

ಬಿಳಿ ತ್ವಚೆ ಸೌಂದರ್ಯದ ರಾಯಭಾರಿ ಅನ್ನುವ ಮನಸ್ಥಿತಿಯನ್ನು ನಮ್ಮೊಳಗೆ ಬಿತ್ತಿದವರು ಯಾರು? ಒಂದು ವೇಳೆ ಮೊದಲಿನಿಂದಲೂ ಕಪ್ಪು ಚರ್ಮವೇ ಸೌಂದರ್ಯದ ಪ್ರತೀಕವಾಗಿ, ಬಿಳಿ ತ್ವಚೆ ಕುರೂಪದ ಪ್ರತಿನಿಧಿಯಂತೆ

ಬಿಂಬಿತವಾಗಿದ್ದರೆ ಹೇಗಿರುತ್ತಿತ್ತು? ಬೆಳ್ಳಗಾಗಿಸುವ ಆಸೆ ಬಿತ್ತಿ ತಮ್ಮ ಕಾಸ್ಮೆಟಿಕ್ ಉತ್ಪನ್ನಗಳನ್ನು ಮಾರುತ್ತಿರುವವರೆಲ್ಲ, ಕಪ್ಪಗಾಗಿಸುವ ತಂತ್ರ ಹುಡುಕುತ್ತಿದ್ದರೇನೋ?

'ಸೌಂದರ್ಯವೆಂದರೆ ಇದೇ' ಎಂಬ ಪೂರ್ವಗ್ರಹ ನಮ್ಮೊಳಗೊಂದು ಪ್ರತಿಮೆ ರೂಪಿಸಿಬಿಟ್ಟಿದೆ. 'ಕಾಂತಿಯುತ ಬಿಳಿ ತ್ವಚೆ, ತೆಳ್ಳನೆ ದೇಹ...' ಇನ್ನೂ ಏನೇನೋ ಅದರ ಗುಣಲಕ್ಷಣಗಳು. ಇವುಗಳ ಆಧಾರದಲ್ಲೇ ಸೌಂದರ್ಯದ ಗುಣಗಾನ ನಡೆಯುತ್ತದೆ.

ಒಂದು ವೇಳೆ ಕಪ್ಪು ಚರ್ಮ, ದಪ್ಪಗಿರುವ ದೇಹ... ಆ ಪ್ರತಿಮೆಯ ಗುಣಲಕ್ಷಣಗಳಾಗಿ ಬಿಟ್ಟಿದ್ದರೆ, ತೆಳ್ಳಗೆ ಬೆಳ್ಳಗಿರುವವರೆಲ್ಲರೂ ಕುರೂಪಿಗಳಾಗಿ ಬಿಡುತ್ತಿದ್ದರೇನೋ?

ಅಸಲಿಗೂ ಸಮಸ್ಯೆಯೇ ಅಲ್ಲದ ಚರ್ಮದ ಬಣ್ಣವನ್ನೇ ಗುರಾಣಿಯಾಗಿ ಬಳಸಿಕೊಂಡು, ನಮ್ಮೊಳಗೆ ಕೀಳರಿಮೆ ಬಿತ್ತಿದವರು, ಬಿತ್ತುತ್ತಿರುವವರು ಯಾರು? ಅದರಿಂದ ಲಾಭವಾಗುತ್ತಿರುವುದಾದರೂ ಯಾರಿಗೆ? ಬಣ್ಣದ ಬೆನ್ನೇರಿ ಹೊರಟಿರುವ ನಮ್ಮ ಒಳಗಣ್ಣು ತೆರೆಯುವುದು ಯಾವಾಗ?

(ಜೂನ್ 2015, ಪ್ರಜಾವಾಣಿ)



# ಹಸಿದವರ ಎದುರು ಹೊಟ್ಟೆ ತುಂಬಿದವರ ಪೌರುಷ

ಮದುವೆ, ಗೃಹಪ್ರವೇಶ ಇನ್ನಿತರ ಸಮಾರಂಭಗಳನ್ನು ಅದ್ದೂರಿಯಾಗಿ ಆಯೋಜಿಸುವ ನಾವು ಅದನ್ನು ಸಮರ್ಥಿಸಿಕೊಳ್ಳಲು ಸಾಮಾನ್ಯವಾಗಿ ನೀಡುವ ಕಾರಣ, 'ನಾಲ್ಕು ಜನಕ್ಕೆ ಊಟ ಹಾಕ್ಬೇಕು'. ತಮ್ಮದೇ ಆದ ನಿಲುವಿಗೆ ಬದ್ಧರಾದ ಕೆಲವೇ ಕೆಲವು ಮಂದಿ ಮಾತ್ರ ತೀರ ಸರಳವಾಗಿ, ಹೆಚ್ಚು ಜನರನ್ನು ಸೇರಿಸದೆ ಮದುವೆ, ಗೃಹಪ್ರವೇಶದಂಥ ಕಾರ್ಯಗಳನ್ನು ನೆರವೇರಿಸುತ್ತಾರೆ. ಹೀಗೆ ಮಾಡುವವರನ್ನು ಹೀಗಳೆಯಲು ಸಹ 'ನಾಲ್ಕು ಜನಕ್ಕೆ ಊಟ ಹಾಕ್ದಲೇ ಮದ್ವೆ ಆದ', 'ದುಡ್ಡು ಉಳ್ಸೋಕೆ ಯಾರ್ನೂ ಕರೆಯದೇ ಹಾಲುಕ್ಕಿಸಿ ಹೊಸ ಮನೆಗೋದ್ರು' ಅನ್ನೋ ಪದಪುಂಜಗಳನ್ನು ಬಳಸುತ್ತೇವೆ.

ಆದರೆ, ಅದ್ದೂರಿ ವಿವಾಹ ಅಥವಾ ಗೃಹಪ್ರವೇಶದ ಹಿಂದಿರುವುದು ಕೇವಲ ಒಂದಷ್ಟು ಮಂದಿಗೆ ಊಟ ಹಾಕುವ ಉದ್ದೇಶ ಮಾತ್ರವೇ? ಅದು ಹೌದಾದರೂ, ಅಸಲಿಗೂ ನಾವು ಊಟ ಹಾಕಬೇಕಿರುವುದು ಯಾರಿಗೆ? ಹಸಿದವರಿಗಲ್ಲವೇ?

ಇತ್ತೀಚೆಗೆ ಪರಿಚಯಸ್ಥರೊಬ್ಬರ ಗೃಹಪ್ರವೇಶಕ್ಕೆ ಹೋಗಿದ್ದೆ. ಎಲ್ಲರನ್ನೂ ಬಹಳ ಪ್ರೀತಿಯಿಂದ ಆಹ್ವಾನಿಸಿದ್ದ ಅವರು, ಗೃಹಪ್ರವೇಶಕ್ಕೆ ಬಂದವರ ಕುಶಲೋಪರಿ ವಿಚಾರಿಸಿ, ತಪ್ಪದೇ ಊಟ ಮಾಡಿಕೊಂಡು ಹೋಗಿ ಎಂದು ಮನವಿ ಮಾಡುತ್ತಿದ್ದರು.

ಸಹಜವಾಗಿಯೇ ನಾವು ಕೂಡ ಊಟ ಸವಿಯಲು ಹೋದೆವು. ನಾವು ಕುಳಿತ ಸಾಲಿನ ಎದುರು ಇಬ್ಬರು ಹುಡುಗಿಯರು ಕುಳಿತಿದ್ದರು. ಅವರ ದಿರಿಸು ಗಮನಿಸಿದರೆ ಕಡು ಬಡವರೆಂಬುದು ತಿಳಿಯುತ್ತಿತ್ತು. ಉಳ್ಳವರೇ ತುಂಬಿದ್ದ ಸ್ಥಳದಲ್ಲಿದ್ದ ಅವರೆಡೆಗೆ

ಸಹಜವಾಗಿಯೇ ನನ್ನ ಗಮನ ಹರಿದಿತ್ತು. ಹಸಿದವರಂತೆ ಆಡುತ್ತಿದ್ದ ಅವರು, ಹೊಟ್ಟೆ ತುಂಬಿಸಿಕೊಳ್ಳುವ ಆತುರದಲ್ಲಿದ್ದರು.

ಅವರನ್ನು ಗಮನಿಸಿದ ನಮ್ಮನ್ನು ಗೃಹಪ್ರವೇಶಕ್ಕೆ ಆಹ್ವಾನಿಸಿದ್ದ ಪರಿಚಯಸ್ಥರು, 'ನೀವ್ಯಾಕ್ರಮ್ಮ ಇಲ್ಲಿ ಬಂದು ಕೂತಿದ್ದೀರ? ಮೊದ್ಲು ಇಲ್ಲಿಂದ ಎದ್ದೇಳಿ. ಅಷ್ಟೂ ಗೊತ್ತಾಗಲ್ವ ನಿಮ್ಗೆ' ಅಂತ ಅವರ ಮೇಲೆ ರೇಗಿ, ಅವರನ್ನು ಅಲ್ಲಿಂದ ಕಳುಹಿಸಿದರು.

ಆ ಇಬ್ಬರು ಅಲ್ಲಿ ಎಂಜಲೆಲೆ ಎತ್ತಲು ಬಂದಿದ್ದ ಮಹಿಳೆಯರ ಮಕ್ಕಳೆಂಬುದು ಆನಂತರ ತಿಳಿಯಿತು. ಇದನ್ನು ಗಮನಿಸಿದ ನಮಗೆ ಒಂಥರ ಆಯಿತು.

ನಮ್ಮಂತಹ ಹೊಟ್ಟೆ ತುಂಬಿದ ಜನರಿಗೆ 'ಊಟ ಮಾಡಿ' ಅಂತ ಬಲವಂತ ಮಾಡಿದವರು, ನಿಜಕ್ಕೂ ಹಸಿದವರನ್ನು ನಿರ್ದಾಕ್ಷಿಣ್ಯವಾಗಿ ಎಬ್ಬಿಸಿ ಕಳುಹಿಸಿದ್ದು ಕೌರ್ಯದ ಒಂದು ವರಸೆ ಎಂಬಂತೆ ಭಾಸವಾಯಿತು. ಇದನ್ನೆಲ್ಲ ಕಂಡೂ ಕಾಣದಂತೆ ನಮ್ಮ ಪಾಡಿಗೆ ನಾವು ಅಚ್ಚುಕಟ್ಟಾಗಿ ತಿಂದು ಎದ್ದದ್ದೂ ತಣ್ಣನೆ ಕೌರ್ಯವಲ್ಲವೇ ಎಂಬ ಪ್ರಶ್ನೆಯೂ ಎದುರಾಯಿತು.

ಇದು ಒಂದು ನಿದರ್ಶನವಷ್ಟೇ. ನಮ್ಮ ಮನೆ ಕಾರ್ಯಕ್ರಮಗಳಲ್ಲಿ ನಾವು ಮಾಡುವುದೂ ಇದನ್ನೇ. ಮದುವೆ ಅಥವಾ ಗೃಹಪ್ರವೇಶದಂಥ ಸಮಾರಂಭಗಳನ್ನು ಅದ್ದೂರಿಯಾಗಿ ನೆರವೇರಿಸುವುದು, 'ನಾಲ್ಕು ಜನರ ಹೊಟ್ಟೆ ತುಂಬಿಸುವುದಕ್ಕೆ' ಎಂಬ ಮಾತು ಹಾಸ್ಯಾಸ್ಪದವೆನಿಸುವುದು ಇಂತಹ ಸಂದರ್ಭಗಳು ಎದುರಾದಾಗಲೇ.

(ನವೆಂಬರ್ 2014, ವಿಜಯವಾಣಿ)



# ಜಾತಿಯೂ... ಉದ್ಯೋಗದಾತರ ಮನಸ್ಥಿತಿಯೂ...

ಮೊನ್ನೆ ಗೆಳೆಯನೊಬ್ಬ ಕಾಲ್ ಮಾಡಿ, 'ಎಂಎನ್ಸಿಯೊಂದರಲ್ಲಿ ಕೆಲಸ ಖಾಲಿ ಇದೆ. ಅಲ್ಲಿ ನಮ್ಮ ಸಂಬಂಧಿಯೇ ಡಿಜಿಎಂ ಆಗಿದ್ದಾರೆ. ಎಂಜಿನಿಯರಿಂಗ್ ಅಥವಾ ಎಂ.ಟೆಕ್. ಓದಿರುವ, ಮೂರು ವರ್ಷ ಕೆಲಸ ಮಾಡಿರುವ ಅನುಭವವುಳ್ಳ ಯಾರಾದರೂ ಇದ್ರೆ ಹೇಳು' ಅಂತಂದ. ನಾನು 'ಸರಿ' ಅಂದೆ. ಅವನು ಡಿಜಿಎಂ ಕಾಂಟ್ಯಾಕ್ಟ್ ನಂಬರ್ ಕೊಟ್ಟ. ಕೂಡಲೇ ಎರಡೂವರೆ ವರ್ಷ ಕಂಪನಿಯೊಂದರಲ್ಲಿ ಕೆಲಸ ಮಾಡಿ, ಅಲ್ಲಿನ ಜಿಎಂ ಜೊತೆ ಕಿರಿಕ್ ಮಾಡಿಕೊಂಡು ಕೆಲಸ ಬಿಟ್ಟು ಒಂದೆರಡು ತಿಂಗಳು ಮನೆಯಲ್ಲಿದ್ದು, ಇದೀಗ ಮತ್ತೆ ಕೆಲಸದ ಹುಡುಕಾಟದಲ್ಲಿದ್ದ ನನ್ನ ಬಿ.ಇ. ಕ್ಲಾಸ್ಮೇಟ್ ಆಗಿದ್ದವನಿಗೆ ಹೀಗೊಂದು ಕೆಲಸ ಖಾಲಿ ಇದೆಯಂತೆ. ಹೆಚ್ಚಿನ ಮಾಹಿತಿಗಾಗಿ ಈ ನಂಬರ್ಗೆ ಕಾಲ್ ಮಾಡು ಅಂತೇಳಿ ಗೆಳೆಯ ಕೊಟ್ಟಿದ್ದ ಕಾಂಟ್ಯಾಕ್ಟ್ ನಂಬರನ್ನು ಅವನಿಗೆ ನೀಡಿದೆ.

ಕೈಲಿದ್ದ ಕೆಲಸ ಬಿಟ್ಟು ಕಂಗೆಟ್ಟಿದ್ದ ಅವನು ಕೂಡಲೇ ಅವರನ್ನು ಸಂಪರ್ಕಿಸಿದ. ಸರಿ ಇಂಟರ್ವ್ಯೂಗೆ ಬನ್ನಿ ಎಂದು ಅವರು ಕರೆದರು. ಅವನು ಅಟೆಂಡ್ ಮಾಡಿ ಬಂದ. ಇದಾದ ಮೇಲೆ ಕೆಲಸ ಖಾಲಿ ಇರುವ ವಿಷಯ ತಿಳಿಸಿದ್ದ ಗೆಳೆಯ ಮತ್ತೆ ಕಾಲ್ ಮಾಡಿದ. 'ಅವ್ರು ಲಿಂಗಾಯಿತ್ರಂತೆ ಹೌದಾ? ಒಂದು ವಿಷ್ಯ ನೆನಪಲ್ಲಿಟ್ಕೊ. ನಮ್ಮವರಿಗೆ ಮೊದಲ ಆದ್ಯತೆ ಕೊಡೋಣ ಅಂತ ನಮ್ಮ ರಿಲೇಟಿವ್ ಹೇಳಿದ್ದಾರೆ. ನಮ್ಮವರು ಯಾರಾದ್ರೂ ಇದ್ರೆ ಹೇಳು' ಅಂತಂದ. ನಮ್ಮವರು ಅನ್ನೋ ಮಾತಿನ ಅರ್ಥ ನಮ್ಮ ಜಾತಿಗೆ ಸೇರಿದವರು ಅನ್ನೋದು ಈ ಹಿಂದಿನ ಅನುಭವಗಳಿಂದ ತಿಳಿದಿದ್ದರಿಂದ ಅವನು ಹೇಳಿದ್ದು ಸರಿಯಾಗಿ ಅರ್ಥ ಆಯ್ತು. ನಾನು ಸರಿ ಅಂತ ಹೇಳಲು ಮನಸ್ಸಾಗದೆ ನಕ್ಕು ಸುಮ್ಮನಾದೆ.

ಆನಂತರ ಬಿ.ಇ. ಕ್ಲಾಸ್ಮೇಟ್ ಆಗಿದ್ದವನಿಗೆ ಕಾಲ್ ಮಾಡಿ, ನಿನ್ನ ರೆಸ್ಯೂಮ್ನಲ್ಲಿ ಕ್ಯಾಸ್ಟ್ ಯಾವ್ದು ಅಂತ ನಮೂದಿಸಿದ್ದ ಅಂತ ಕೇಳಿದೆ. ಇಲ್ಲ ರೆಸ್ಯೂಮ್ನಲ್ಲಿ ಹಾಕಿರಲಿಲ್ಲ. ಅವರೇ ನಿಮ್ಮ ಜಾತಿ ಯಾವ್ದು ಅಂತ ಕೇಳಿದ್ರು. ನಾನು ಲಿಂಗಾಯತ್ಸ್ ಅಂದೆ. ವೊಕ್ಕಲಿಗಾಸ್ ಅಂತ ಸುಳ್ಳು ಹೇಳ್ಬೇಕಿತ್ತಾ ಅಂತ ನನ್ನನ್ನು ಕೇಳಿದ. 'ಅವ್ರು ಜಾತಿವಾದಿಗಳು ಕಣಪ್ಪ. ಅದಿರ್ಲಿ ಇಂಟರ್ವ್ಯೂ ಹೇಗಾಯ್ತು' ಅಂತ ಮಾತು ಬದಲಿಸಿದೆ. 'ಬೇಸಿಕ್ ಕ್ವಶ್ಚನ್ಸ್ ಕೇಳಿದ್ರು. ಆನ್ಸರ್ ಮಾಡ್ದೆ. ಕಾಲ್ ಮಾಡಿ ತಿಳಿಸ್ತೀವಿ ಅಂದಿದ್ದಾರೆ. ಅವ್ರು ನಿಮ್ ಜಾತಿ ಯಾವ್ದು ಅಂತ ಕೇಳ್ದಾಗ್ಲೆ ನನ್ನ ಸಿಕ್ಸ್ತ್ ಸೆನ್ಸ್ಗೆ ಹೀಗಾಗಬಹುದೆಂಬ ವಿಚಾರ ಹೊಳೆದಿತ್ತು' ಅಂದ.

'ಹಾಗಾದ್ರೆ ಒಂದುವೇಳೆ ನಿನಗೆ ಅಲ್ಲಿ ಕೆಲಸ ಸಿಗಲಿಲ್ಲ ಅಂದ್ರೆ ಅದಕ್ಕೆ ಕಾರಣ ಜಾತಿನೇ ಬಿಡು' ಅಂತಂದು ಕಾಲ್ ಕಟ್ ಮಾಡಿದೆ.

ಕೆಲಸ ಗಿಟ್ಟಿಸಿಕೊಳ್ಳಲು ಕೌಶಲ್ಯಕ್ಕಿಂತ ಜಾತಿಯೇ ಪ್ರಮುಖ ಅರ್ಹತೆಯಾಗುವುದು ತೀರ ಅಪರೂಪವೇನಲ್ಲ. ಖಾಸಗಿ ಸಂಸ್ಥೆಗಳ ಆಯಕಟ್ಟಿನ ಸ್ಥಾನಗಳಲ್ಲಿ ಜಾತಿಯ ಕಡುವ್ಯಾಮೋಹಿಗಳು ಕುಳಿತುಬಿಟ್ಟರೆ ಮುಗಿಯಿತು. ನೇಮಕಾತಿಯಲ್ಲಿ ಸ್ವಜಾತಿಯವರಿಗೆ ಮೊದಲ ಪ್ರಾಶಸ್ತ್ಯ ದೊರೆಯುವುದು ನಿಶ್ಚಿತ.

ವೈದ್ಯರೊಬ್ಬರ ಒಡೆತನದಲ್ಲಿರುವ ಕಾಲೇಜೊಂದರಲ್ಲಿ ಪರಿಚಯವಿರುವ ಒಬ್ಬರು ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದಾರೆ. ಅವರು ನನ್ನ ಕಿವಿಗಾಕಿದ ವಿಷಯ, ಪ್ರತಿ ವರ್ಷ ಕಾಲೇಜಿಗೆ ಬೋಧಕ ಹಾಗು ಬೋಧಕೇತರ ಸಿಬ್ಬಂದಿ ನೇಮಕ ಮಾಡಿಕೊಳ್ಳುವಾಗ ಮೊದಲ ಆದ್ಯತೆಯನ್ನು ಒಕ್ಕಲಿಗರಿಗೆ ನೀಡಬೇಕೆಂದು ಆ ವೈದ್ಯ ಮಹಾಶಯ ಮೌಖಿಕವಾಗಿ ಸೂಚಿಸಿದ್ದಾರಂತೆ. ಅರ್ಹ ಒಕ್ಕಲಿಗ ಅಭ್ಯರ್ಥಿಗಳು ಇರದಿದ್ದ ಸಂದರ್ಭದಲ್ಲಿ ಇತರ ಜಾತಿಗಳನ್ನು ಪರಿಗಣಿಸಬಹುದಂತೆ.

ಆದರೆ ಯಾವುದೇ ಕಾರಣಕ್ಕೂ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರನ್ನು ನೇಮಕ ಮಾಡಿಕೊಳ್ಳಬಾರದೆಂದು ನಿರ್ಬಂಧ ವಿಧಿಸಿದ್ದಾರಂತೆ. ಇವನ್ನೆಲ್ಲ ಗಮನಿಸುತ್ತಿದ್ದರೆ ಖಾಸಗಿ ರಂಗದಲ್ಲೂ ಮೀಸಲಾತಿ ಜಾರಿಗೆ ತರುವ ಕುರಿತು ಚಿಂತಿಸುವ ಜರೂರತ್ತು ಎದ್ದು ಕಾಣುತ್ತದೆ.

ಜಾತಿ ಎಲ್ಲಿದೆ? ಉದ್ಯೋಗದಲ್ಲಿ ಮೀಸಲಾತಿಯನ್ನು ಕಿತ್ತೊಗೆಯಬೇಕು. ಇದರಿಂದಾಗಿ ಅರ್ಹರಿಗೆ ಅವಕಾಶ ದೊರೆಯುವುದಿಲ್ಲವೆಂದು ಬೊಬ್ಬಿಡುವವರು ತಮ್ಮ ಒಡಲಾಳದಲ್ಲಿ ಹುದುಗಿಕೊಂಡಿರುವ ಜಾತಿಯ ಹೊಲಸಿನೆಡೆಗೆ ಮುಖ ಹಾಕಿ, ಮೂಗಿನ ಹೊಳ್ಳೆಗಳನ್ನು ಅಗಲಿಸಿಕೊಂಡು ಅದರ ದುರ್ವಾಸನೆ ಆಸ್ವಾದಿಸಿ ಪುನೀತರಾಗುವುದು ಒಳ್ಳೆಯದು.

ಜನರ ದೇಹ ಬಾಧಿಸುವ ತರಹೇವಾರಿ ರೋಗಗಳಿಗೆ ಔಷಧಿ ನೀಡುವ ವೈದ್ಯರನ್ನೇ ಜಾತಿ ರೋಗ ಆವರಿಸಿಕೊಂಡಿರುವಾಗ, ಬೇರೆಯವರ ಕಥೆ ಬಿಡಿಸಿ ಹೇಳಬೇಕಾದ ಅಗತ್ಯವೇ ಇಲ್ಲ ಅಲ್ಲವೇ?

ನಾವು ವಿದ್ಯಾವಂತರಾಗುತ್ತಿದ್ದೇವೆ, ಬುದ್ಧಿವಂತರಾಗುತ್ತಿದ್ದೇವೆ, ವಿಜ್ಞಾನ-ತಂತ್ರಜ್ಞಾನದಲ್ಲಿ ಔನತ್ಯ ಸಾಧಿಸಿ ಬದುಕಿಗೆ ಮತ್ತಷ್ಟು ಬಣ್ಣಗಳನ್ನು ತುಂಬಿಕೊಳ್ಳುತ್ತಿದ್ದೇವೆ. ಆದರೆ ಮನುಷ್ಯರಾಗುತ್ತಿದ್ದೇವಾ? ಜಾತಿ ಪ್ರಜ್ಞೆಯಿಂದ ದೂರ ಸರಿಯುತ್ತಿದ್ದೇವಾ?

(ಫೆಬ್ರವರಿ 2015, ವಿಜಯವಾಣಿ)



# ಮಾನ ಮರ್ಯಾದೆಯ ಪರದೆ ಹಿಂದಿನ ದುಗುಡ

ಮೊನ್ನೆ ತಮ್ಮ ಮಗಳ ಮದುವೆ ಆಹ್ವಾನ ಪತ್ರಿಕೆ ನೀಡಲು ಬಂದಿದ್ದ ವ್ಯಕ್ತಿಯೊಬ್ಬರು, ಮದುವೆ ಮಾಡುವಾಗ ಎದುರಿಸಬೇಕಾದ ಆರ್ಥಿಕ, ಸಾಮಾಜಿಕ ಮತ್ತು ಭಾವನಾತ್ಮಕ ಸಂಕಷ್ಟಗಳ ಕುರಿತು ಒಂದಷ್ಟು ಹರಟಿದರು. ತಮ್ಮ ಭಾವಿ ಅಳಿಯ ವಿದೇಶದಲ್ಲಿರುವುದಾಗಿಯೂ, ಸುಸಂಸ್ಕೃತ ಕುಟುಂಬದ ಕುಡಿಯಾಗಿರುವುದಲ್ಲದೇ ಕೈ ತುಂಬಾ ಸಂಬಳ ಎಣಿಸುತ್ತಿರುವುದಾಗಿ ಹೆಮ್ಮೆಯಿಂದ ಹೇಳಿಕೊಂಡರು. ಆನಂತರ 'ಆದರೆ...?' ಶುರುವಾಯಿತು.

ಏನ್ ಹಾಗಂದ್ರೆ ಅಂತ ನಾವು ಕೇಳುವ ಮೊದಲೇ, ಆದರೆ ಹಿಂದಿರುವ ವಿಚಾರವನ್ನು ಹಂಚಿಕೊಂಡರು. 'ಹುಡುಗನಿಗೆ ಸ್ವಲ್ಪ ಅನುಮಾನದ ರೋಗ. ಕಳೆದ ವಾರ ದಾವಣಗೆರೆಯಲ್ಲಿರುವ ಫ್ರೆಂಡ್ ಮನೆಗೆ ಮಗಳು ಒಬ್ಬಳೇ ಹೋಗಿದ್ದಳು. ಈ ವಿಚಾರವನ್ನು ತನ್ನ ಗಂಡನಾಗಲಿರುವವನಿಗೂ ತಿಳಿಸಿದಳು. ಅದಕ್ಕೆ, ಒಬ್ಬಳೇ ಯಾಕೆ ಹೋದೆ ಅಂತ ಪ್ರಶ್ನಿಸಿದ್ದಾನೆ. ಮದುವೆಗೂ ಮುನ್ನವೇ ತನ್ನ ಮೇಲೆ ಹಕ್ಕು ಚಲಾಯಿಸಲು ಬರುತ್ತಿರುವ, ತನ್ನ ಚಾರಿತ್ರ್ಯದ ಕುರಿತು ಅನುಮಾನ ವ್ಯಕ್ತಪಡಿಸುತ್ತಿರುವ ಹುಡುಗನ ವರ್ತನೆಯಿಂದ ಸಿಟ್ಟಾದ ನಮ್ಮ ಮಗಳು ಅವನೊಂದಿಗೆ ಜಗಳವಾಡಿದ್ದಾಳೆ. ಆನಂತರ, ಹುಡುಗ ಸರಿಯಿಲ್ಲ ಡ್ಯಾಡಿ. ಈಗ್ಲೇ ನನ್ನ ಮೇಲೆ ಅನುಮಾನ ಪಡುವವನು ಇನ್ನು ಮದುವೆ ಆದ್ಮೇಲೆ ಏನ್ ಗತಿ. ನಾನಂತೂ ಅವನನ್ನು ಮದುವೆ ಆಗಲ್ಲ. ಈ ಮದುವೆನಾ ಕ್ಯಾನ್ಸಲ್ ಮಾಡ್ಬಿಡಿ ಅಂತ ಮಗಳು ಹಟ ಹಿಡಿದಳು. ಅಷ್ಟೊತ್ತಿಗಾಗಲೇ ಎಂಗೇಜ್ಮೆಂಟ್ ಮುಗಿದು, ಕಲ್ಯಾಣ ಮಂಟಪಕ್ಕೆ ಅಡ್ವಾನ್ಸ್ ಕೂಡ ಕೊಡಲಾಗಿತ್ತು. ಅಷ್ಟು ಸಾಲದೆಂದು ಮದುವೆ ಆಹ್ವಾನ ಪತ್ರಿಕೆಯನ್ನು ಒಂದಷ್ಟು ಜನರಿಗೆ ಹಂಚಲಾಗಿತ್ತು. ಈ ಸಂದರ್ಭದಲ್ಲಿ

ಮದುವೆ ಕ್ಯಾನ್ಸಲ್ ಆದ್ರೆ ನಮ್ಮ ಮಾನ ಮರ್ಯಾದೆ ಮೂರು ಕಾಸಿಗೆ ಹರಾಜಾಗುತ್ತಿತ್ತು. ಕೈಯಲ್ಲಿ ಕಾಸಿಲ್ಲದಿದ್ದರೂ ಹೇಗೋ ಸಾಲ ಮಾಡಿ ಹೊಂದಿಸಿ ಮದುವೆ ಮಾಡುತ್ತಿದ್ದೇನೆ. ಇಂತಹ ಸ್ಥಿತಿಯಲ್ಲಿ, ಮದುವೆ ಕ್ಯಾನ್ಸಲ್ ಆದ್ರೆ ಏನ್ ಗತಿ ಅಂತ ಯೋಚನೆ ಶುರುವಾಯ್ತು. ಎರಡ್ಮೂರು ದಿನ ಮಗಳಿಗೆ ಏನೇನೋ ಹೇಳಿ ಕೊನೆಗೂ ಸಮಾಧಾನ ಪಡಿಸಿದೆ. ಆ ಹುಡುಗನಿಗೆ ಫೋನ್ ಮಾಡಿ ಹಿಗ್ಗಾಮುಗ್ಗಾ ಬೈದು ತನ್ನ ಮಗಳ ಕ್ಷಮೆ ಕೋರುವಂತೆ ಮಾಡಿದೆ. ಅಂತೂ ಹೇಗೋ ಎಲ್ಲವೂ ಸರಿ ಆಯಿತು' ಅಂತೇಳಿ ಅವರು ನಿಟ್ಟುಸಿರು ಬಿಟ್ಟರು.

ಭಾವಿ ಗಂಡನ 'ಅನುಮಾನ ರೋಗ'ದ ಕುರಿತು ಆತಂಕ ವ್ಯಕ್ತಪಡಿಸುತ್ತಿರುವ ಹುಡುಗಿಯ ದುಗುಡ ನಿವಾರಣೆಯಾಗುವ ಮುನ್ನವೇ ಅವಳು ಹಸೆಮಣೆ ಏರುತ್ತಿದ್ದಾಳೆ. ಸದ್ಯ ಹೇಗೋ ಮದುವೆ ಮಾಡಿ ಕೈ ತೊಳೆದುಕೊಂಡರೆ ಸಾಕು ಎಂಬ ಮನಸ್ಥಿತಿಯಲ್ಲಿರುವ ಅಪ್ಪನಿಗೆ ಏನನ್ನೂ ಹೇಳಲಾಗದೆ ಅನಿವಾರ್ಯವಾಗಿ ಈಗಾಗಲೇ ಎಂಗೇಜ್ಮೆಂಟ್ ಆಗಿರುವ ಹುಡುಗನೊಂದಿಗೆ ದಾಂಪತ್ಯ ಬದುಕಿಗೆ ಕಾಲಿರಿಸುತ್ತಿದ್ದಾಳೆ.

ಮುಂದೇನಾಗುವುದೋ ಯಾರಿಗೂ ತಿಳಿದಿಲ್ಲ. ಇಬ್ಬರ ನಡುವೆ ಹೊಂದಾಣಿಕೆ ಏರ್ಪಟ್ಟು ನೆಮ್ಮದಿಯಿಂದಿರಲಿ ಎಂಬುದು ಎಲ್ಲರ ಆಶಯ.

ಆದರೆ ವಿವಾಹಕ್ಕೂ ಮುನ್ನ ಎಲ್ಲವೂ ಸರಿ ಇರುವಂತೆ ತೋರುವ ಸಂಬಂಧಗಳಲ್ಲೇ ಬಿರುಕು ಮೂಡುತ್ತಿರುವ ಸಂದರ್ಭದಲ್ಲಿ, ಮದುವೆಗೂ ಮುನ್ನವೇ ಭಾವಿ ಪತಿಯ 'ಅನುಮಾನ ರೋಗ'ದ ಕುರಿತು ತಿಳಿದುಕೊಂಡು ಘಾಸಿಗೊಂಡವಳಿಗೆ ಈಗಾಗಲೇ ನಿಗದಿಯಾಗಿರುವ ಮದುವೆಯನ್ನು ಮುರಿದುಕೊಂಡು ನಿಟ್ಟುಸಿರು ಬಿಡುವ ಸ್ವಾತಂತ್ರ್ಯವೂ ಇಲ್ಲವೇ ಎಂಬುದು ಪ್ರಶ್ನೆ.

ಹೇಗೋ ತೇಪೆ ಹಾಕಿ ಮದುವೆ ಮಾಡಿದರಾಯಿತು. ಆನಂತರ ಎಲ್ಲವೂ ಸರಿ ಹೋಗುತ್ತದೆ ಎನ್ನುವ ಪೋಷಕರ ಭಂಡ ಧೈರ್ಯ, ಮಗಳ ಬದುಕನ್ನು ಎಲ್ಲಿಗೆ ಕೊಂಡೊಯ್ಯಬಹುದು?

ಈ ಮೇಲಿನ ಪ್ರಕರಣ ಒಂದು ನಿದರ್ಶನವಷ್ಟೇ. ನಿಗದಿಯಂತೆ ಮದುವೆ ನಡೆಯದಿದ್ದರೆ ತಮ್ಮ ಕುಟುಂಬದ ಘನತೆಗೆ ಕುಂದುಂಟಾಗುತ್ತದೆ ಎಂಬುದನ್ನೇ ಮುಂದು ಮಾಡಿ, ಹುಡುಗನ ಹುಳುಕುಗಳು ತಿಳಿದ ಮೇಲೂ ಮದುವೆ ಕ್ಯಾನ್ಸಲ್ ಮಾಡದೇ ತಮ್ಮ ಹೆಣ್ಣು ಮಕ್ಕಳನ್ನು ಗೊಂದಲ ಮತ್ತು ಆತಂಕದ ಕಂದಕಕ್ಕೆ ನೂಕುವ ಪ್ರಕರಣಗಳಿಗೆ ಲೆಕ್ಕವಿಡುವವರು ಯಾರು? 'ಮಾನ-ಮರ್ಯಾದೆ'ಯ ಗೋಡೆಗಳ ನಡುವೆ ಸಿಕ್ಕು ಹೆಣ್ಣು ಮಕ್ಕಳ ಒಳಮನಸ್ಸು ಘಾಸಿಗೊಳ್ಳುತ್ತಲೇ ಇದೆ. ಇದು ಹೀಗೇ ಮುಂದುವರೆಯಬೇಕೆ?

(ಫೆಬ್ರವರಿ 2015, ಪ್ರಜಾವಾಣಿ)



# ಮೀಸಲಾತಿ ಬಲಾಢ್ಯರ ಪಾಲಾಗದಿರಲಿ

ಜಾತಿ ವ್ಯವಸ್ಥೆಯಿಂದ ಹೊರ ಬರಲು ಬಯಸದೆ 'ಮೇಲಿನ' ಜನರಾಗಿಯೇ ಉಳಿಯಲು ಅಪೇಕ್ಷಿಸುವ ನಾವು, ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಮೀಸಲಾತಿ ನೀಡುವುದನ್ನು ಖಂಡಿಸುವಲ್ಲಿ ತೋರುವ ಉತ್ಸಾಹವನ್ನು ಅವರ ಸಂಕಷ್ಟಗಳನ್ನು ಅರಿಯುವ ನಿಟ್ಟಿನಲ್ಲಿ ಪ್ರದರ್ಶಿಸುವುದೇ ಇಲ್ಲ.

ಆರಂಭದಲ್ಲಿ ನನಗೂ ಮೀಸಲಾತಿ ಕುರಿತು ಅಸಹನೆ ಇತ್ತಾದರೂ ಜಾತಿ ವ್ಯವಸ್ಥೆಯ ಕ್ರೌರ್ಯದ ಮುಖಗಳ ಪರಿಚಯವಾದ ಮೇಲೆ ಜಾತಿ ಆಧಾರಿತ ಮೀಸಲಾತಿಯ ಮಹತ್ವ ಅರಿವಾಯಿತು.

ಎಂಜಿನಿಯರಿಂಗ್ ಸೇರಿದ ಸಂದರ್ಭದಲ್ಲಿ ಮೀಸಲಾತಿ ಸೌಲಭ್ಯದಿಂದ ಸಿಇಟಿಯಲ್ಲಿ ಕಡಿಮೆ ರಾಂಕ್ ಪಡೆದೂ, ಬೇಡಿಕೆ ಇರುವ ಕೋರ್ಸಿಗೆ ಸುಲಭವಾಗಿ ಸೀಟು ಪಡೆದ ಎಸ್ಸಿ/ಎಸ್ಟಿ ವಿದ್ಯಾರ್ಥಿಗಳ ಬಗ್ಗೆ ನನ್ನ ಸಹಪಾಠಿಗಳು ಹಗುರವಾಗಿ ಮಾತನಾಡುತ್ತಿದ್ದದ್ದು ಆಗಾಗ ಕಿವಿಗೆ ಬೀಳುತ್ತಿತ್ತು. ನಾನು ಮೀಸಲಾತಿ ಪರ ವಕಾಲತ್ತು ವಹಿಸಲು ಮುಂದಾದರೆ, ಬೇರೆ ಎಲ್ಲದಕ್ಕೂ ಮೀಸಲಾತಿ ಇರಲಿ. ಆದರೆ ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾತಿ ಇರಲೇಬಾರದು. ಪ್ರತಿಭೆಗೆ ಮನ್ನಣೆ ಸಿಗಬೇಕೆಂದು ವಾದಿಸುತ್ತಿದ್ದರು. ಕೆಳಜಾತಿಯಲ್ಲಿ ಹುಟ್ಟಿದ ಕಾರಣಕ್ಕಾಗಿ ಅವರು ಎದುರಿಸುವ ಅವಮಾನ ಮತ್ತು ಸವಾಲುಗಳ ಪರಿಚಯವಿಲ್ಲದ ನಾವು ಮೀಸಲಾತಿಯಿಂದ ಅವಕಾಶ ವಂಚಿತರಾಗುತ್ತಿದ್ದೇವೆ ಎಂಬ ಕಾರಣಕ್ಕೆ ಮೀಸಲಾತಿ ವಿರುದ್ಧವಾಗಿ

ಮಾತನಾಡುತ್ತೇವೆ. ಆದರೆ ಜಾತಿ ವಿಚಾರ ಬಂದಾಗ ಶ್ರೇಷ್ಠತೆಯ ವ್ಯಸನಕ್ಕೆ ಶರಣಾಗುತ್ತೇವೆ.

ಸಿಇಟಿಯಲ್ಲಿ 30 ಸಾವಿರ ರಾಂಕ್ ಪಡೆದ ನನ್ನ ಗೆಳೆಯನೊಬ್ಬನಿಗೆ ಪ್ರತಿಷ್ಠಿತ ಕಾಲೇಜೊಂದರಲ್ಲಿ ಸರ್ಕಾರಿ ಕೋಟಾದಡಿ ಸೀಟು ಸಿಕ್ಕಿತು. ಅವನ ತಂದೆ ಅದೇ ಕಾಲೇಜಿನ ಸಿವಿಲ್ ಎಂಜಿನಿಯರಿಂಗ್ ವಿಭಾಗದ ಮುಖ್ಯಸ್ಥರಾಗಿದ್ದರು. ಆರ್ಥಿಕವಾಗಿ ಪ್ರಬಲರಾಗಿದ್ದರೂ, ಮೀಸಲಾತಿ ಸೌಲಭ್ಯ ಬಳಸಿಕೊಂಡರು.

ತಿಂಗಳಿಗೆ ಲಕ್ಷಾಂತರ ರೂ. ಸಂಪಾದಿಸುವ ಸರ್ಕಾರಿ ಅಧಿಕಾರಿಗಳು, ಪ್ರಾಧ್ಯಾಪಕರ ಮಕ್ಕಳು ಸಹ ಮೀಸಲಾತಿ ಸೌಲಭ್ಯ ಪಡೆಯುವುದನ್ನು ಕಂಡಾಗ ಸಹಜವಾಗಿಯೇ ಬೇಸರವಾಗುತ್ತದೆ. ಮೀಸಲಾತಿ ಉಳ್ಳವರ ಪಾಲಾದಂತೆ, ಅದೇ ಜಾತಿಯ ಬಡವರು ಅವಕಾಶ ವಂಚಿತರಾಗುತ್ತಿದ್ದಾರೆ. ಮೀಸಲಾತಿ ಪಡೆದು ಆರ್ಥಿಕವಾಗಿ ಬಲಾಢ್ಯರಾದವರಿಗೆ ಮತ್ತೆ ಮತ್ತೆ ಮೀಸಲಾತಿ ಕಲ್ಪಿಸುವುದು ಸಹಜವಾಗಿಯೇ ಇತರರಲ್ಲಿ ಅಸಹನೆ ಮೂಡಿಸುತ್ತದೆ.

(ಏಪ್ರಿಲ್ 2013, ಪ್ರಜಾವಾಣಿ)



# ಮೊಬೈಲೂ... ಕಾಣದ ಮುಖಗಳ ಕಾಟವೂ...

ಕಾಲ್ ಮತ್ತು ಮೆಸೇಜ್ ಮಾಡುವುದಕ್ಕಷ್ಟೇ ಸೀಮಿತವಾಗದೇ ಪುಟ್ಟ ಪರದೆಯ ಮೇಲೆ ಜಗದಗಲದ ವಿದ್ಯಮಾನಗಳನ್ನು ಬಿತ್ತರಿಸುವ ಮತ್ತು ಜಗದೊಂದಿಗೆ ಸಂವಹನ ಸಾಧಿಸುವ ಸಾಧನವಾಗಿರುವ ಮೊಬೈಲ್ ತಂದೊಡ್ಡುವ ಕಿರಿಕಿರಿಗಳೂ ಕಡಿಮೆ ಏನಿಲ್ಲ. ಕೆಲ ಅತೃಪ್ತ ಆತ್ಮಗಳಿಗೆ ಯಾವುದಾದರೂ ಮೊಬೈಲ್ ನಂಬರ್ ಸಿಕ್ಕರೆ ಸಾಕು, ಆ ನಂಬರ್ಗೆ ಕರೆ ಮಾಡಿ ಪೀಡಿಸಲು ಶುರು ಹಚ್ಚಿಕೊಳ್ಳುತ್ತವೆ. ಜಗದಲ್ಲಿ ಇರುವವರೆಲ್ಲ ತಮ್ಮ ಸಾಂಗತ್ಯ ಬಯಸುವವರೇನೊ ಎಂಬಂತೆ ಮಾತನಾಡುತ್ತಾರೆ. ಅದರಲ್ಲೂ ಕೆಲ ಗಂಡಸರಿಗೆ ಯುವತಿಯರ ಮೊಬೈಲ್ ನಂಬರ್ ಸಿಕ್ಕರೆ ತರಹೇವಾರಿ ಕಥೆಗಳು ತೆರೆದುಕೊಳ್ಳಲಾರಂಭಿಸುತ್ತವೆ.

ಇತ್ತೀಚೆಗೆ ನನ್ನ ಗೆಳತಿಯೊಬ್ಬಳ ಕವನ ಪತ್ರಿಕೆಯೊಂದರಲ್ಲಿ ಪ್ರಕಟವಾಗಿತ್ತು. ಅವಳ ಹೆಸರಿನೊಂದಿಗೆ ಮೊಬೈಲ್ ನಂಬರನ್ನೂ ಪ್ರಕಟಿಸಲಾಗಿತ್ತು. ಅದಾದ ಮೇಲೆ ಅವಳಿಗೆ ಹೊಸ ಪೀಕಲಾಟ ಶುರುವಾಯಿತು. ಕರೆ ಮಾಡಿ 'ನಿಮ್ಮ ಕವನ ತುಂಬಾ ಚೆನ್ನಾಗಿದೆ' ಅಂತ ಮೊದಲಿಗೆ ಮಾತು ಶುರುವಿಟ್ಟುಕೊಳ್ಳುತ್ತಿದ್ದ ಕೆಲ ಪುರುಷರು, ಆನಂತರ 'ನೀವು ಏನ್ ಮಾಡ್ತಿದ್ದೀರಿ, ನಿಮ್ಗೆ ಮದ್ವೆ ಆಗಿದ್ಯಾ, ಗಂಡನಿಗೆ ಏನ್ ಕೆಲ್ಸ, ಮಕ್ಕಳೆಷ್ಟು' ಅಂತೆಲ್ಲ ವಿಚಾರಿಸುತ್ತಿದ್ದರು. ಒಬ್ಬ ಪುಣ್ಯಾತ್ಮನಂತೂ 'ನೀವು ಮನೇಲಿ ಒಬ್ರೆ ಫ್ರೀಯಾಗಿ ಇರ್ತೀರಾ? ನಿಮ್ಮೂರಿಗೆ ಯಾವಾಗ ಬರಲಿ? ಅಲ್ಲಿ ನೋಡೋ ಸ್ಥಳಗಳು ಯಾವುವು?' ಅಂತೆಲ್ಲ ಕೇಳೋಕೆ ಶುರು ಮಾಡಿ, ಇವಳು ಗರಂ ಆಗಿದ್ದಕ್ಕೆ, 'ನಾನು ಕ್ಲೋಸ್ ಆಗೋಣ ಅಂದ್ರೆ ನೀವು ದೂರ ತಳ್ಳೋಕೆ ನೋಡ್ತೀರಲ್ರೀ' ಅಂತಂದ. ಗೆಳತಿ ಕಾಲ್ ಕಟ್ ಮಾಡಿದ್ಲು.

---

ನಮ್ಮ ಪಕ್ಕದ ಮನೆಯ ಅಜ್ಜಿಯ ಬಳಿಯೂ ಮೊಬೈಲ್ ಇದೆ. ಇತ್ತೀಚೆಗೆ ಯಾವನೋ ಒಬ್ಬ ಅವರಿಗೆ ಕಾಲ್ ಮಾಡಿ 'ಐ ಲವ್ ಯೂ' ಹೇಳಲಾರಂಭಿಸಿದ್ದ. ಅಜ್ಜಿ ಮನೆಯವರಿಗೆ ವಿಷಯ ತಿಳಿಸಿ, ಅವರೆಲ್ಲ ಆ ನಂಬರ್ಗೆ ಕರೆ ಮಾಡಿ ಹಿಗ್ಗಾಮುಗ್ಗಾ ಝಾಡಿಸಿದ ನಂತರವೂ ತೆಪ್ಪಗಾಗದೆ ಕಾಟ ಕೊಡುತ್ತಿದ್ದವನು, ಪೊಲೀಸ್ ಕಂಪ್ಲೇಂಟ್ ಕೊಡ್ಬೇಕಾ ಅಂತ ಹೆದರಿಸಿದ ನಂತರ ಅಜ್ಜಿ ತಂಟೆಗೆ ಬರದೆ ಸುಮ್ಮನಾಗಿದ್ದಾನೆ.

---

ಮತ್ತೊಬ್ಬ ಗೆಳತಿ ಇತ್ತೀಚೆಗೆ ಯಾಕೋ ಮಂಕಾಗಿದ್ದಳು. ಕಾರಣ ಕೇಳಿದಾಗ ಅವಳು ಹೇಳಿದ್ದಿಷ್ಟು.

ಅವಳಿಗೆ ಯುವಕನೊಬ್ಬ ಮೊಬೈಲ್ ಮೂಲಕ ಪರಿಚಯವಾಗಿದ್ದ. ಆಗಾಗ ಕಾಲ್ ಮಾಡಿ ಕಷ್ಟ-ಸುಖ ಹಂಚಿಕೊಳ್ಳುತ್ತಿದ್ದ. ಅಪರೂಪಕ್ಕೊಮ್ಮೊಮ್ಮೆ ಇಬ್ಬರೂ ಭೇಟಿ ಆಗುತ್ತಿದ್ದರು. ತನಗೆ ಮದುವೆ ಆಗಿ ಇಬ್ಬರು ಮಕ್ಕಳಿರುವುದಾಗಿ ಆತ ತಿಳಿಸಿದ್ದ. ‘ನನಗೆ ನೀನು ಅಣ್ಣನ ಸಮಾನ. ನಿನ್ನ ಬಗ್ಗೆ ನನಗೆ ಬೇರೆ ಯಾವ ರೀತಿಯ ಭಾವನೆಯೂ ಇಲ್ಲ’ ಎಂದು ಅವಳು ಅವನಿಗೆ ಸ್ಪಷ್ಟವಾಗಿ ಹೇಳಿದ್ದಳು. ಅವರಿಬ್ಬರ ನಡುವಿನ ಸಂಬಂಧ ಉತ್ತಮವಾಗಿಯೇ ಇತ್ತು.

ಈ ನಡುವೆ ಒಂದು ದಿನ ಅಪರಿಚಿತ ನಂಬರ್ನಿಂದ ಅವಳಿಗೆ ಕರೆ ಬಂತು. ಯಾರೋ ಒಬ್ಬರು ಮಹಿಳೆ ಇವಳ ಕುರಿತು ಮಾಹಿತಿ ಕೇಳಲಾರಂಭಿಸಿದರು. ನೀವ್ಯಾರು, ನಿಮ್ಮ ಹೆಸರೇನು, ಏನ್ ಮಾಡ್ಕೊಂಡಿದ್ದೀರ, ಯಾವ ಊರು ಅಂತೆಲ್ಲ ಕೇಳಿದ ಆಕೆ, ಕೊನೆಗೆ ನನ್ನ ಗಂಡನಿಗೂ ನಿಮಗೂ ಏನ್ ಸಂಬಂಧ? ನಿಮ್ ನಂಬರ್ ಅವರ

ಮೊಬೈಲ್ನಲ್ಲಿತ್ತು. ಒಂದು ಮೂವತ್ತು ಮೆಸೇಜ್, ಮೂರ್ನಾಲ್ಕು ಕಾಲ್ ಮಾಡಿದ್ದೀರ. ನಿಮ್ಗೂ ನನ್ ಗಂಡನಿಗೂ ಏನಾಗ್ಬೇಕು ಅಂತೆಲ್ಲ ವಿಚಾರಿಸಿದ್ದಾರೆ.

ಇವಳು ಅವನು ಮೊಬೈಲ್ ಮೂಲಕ ಪರಿಚಯವಾದ ಬಗೆ ವಿವರಿಸಿ ಆತ ನನಗೆ ಅಣ್ಣನಿದ್ದ ಹಾಗೆ ಅಂತೆಲ್ಲ ಹೇಳಿದ್ದಾಳೆ. ನೀವು ಆ ರೀತಿ ಹುಡ್ಗಿ ಅಲ್ಲ ಅಂದ್ರೆ ಸಮಸ್ಯೆ ಇಲ್ಲ ಬಿಡಿ ಅಂತ ಆ ಮಹಿಳೆ ಹೇಳಿದ್ದಾರೆ.

ನನ್ನಿಂದ ಗಂಡ-ಹೆಂಡತಿ ಸಂಬಂಧ ಹಾಳಾಗೋದು ಬೇಡ. ಇನ್ಮೇಲೆ ನಾನು ನಿಮ್ಮ ಗಂಡನಿಗೆ ಕಾಲ್ ಅಥವಾ ಮೆಸೇಜ್ ಮಾಡಲ್ಲ. ನಮ್ಮಿಬ್ಬರ ನಡುವೆ ನೀವು ಕಲ್ಪಿಸಿಕೊಂಡಿರುವಂತಹ ಸಂಬಂಧ ಇಲ್ಲ ಅಂತ ಅವಳು ಸ್ಪಷ್ಟಪಡಿಸಿದ್ದಾಳೆ.

---

ಸಂಪರ್ಕ ಸಾಧನವಾಗಿ ಮನಸ್ಸುಗಳನ್ನು ಬೆಸೆಯುವ ಮೊಬೈಲ್, ಹೀಗೆ ಅಪರಿಚಿತರ ಉಪಟಳದಿಂದಾಗಿ ಮನಸ್ಸಿನ ನೆಮ್ಮದಿಗೆ ಭಂಗ ತರುವ ಸಾಧ್ಯತೆಯೂ ಇರುತ್ತದೆ. ಅಪರಿಚಿತರೊಂದಿಗೆ ಮೊಬೈಲ್ನಲ್ಲಿ ಸಂಬಂಧ ಬೆಳೆಸುವುದೆಂದರೆ, ಹಲವು ರಿಸ್ಕ್ ಗಳಿಗೆ ನಮ್ಮನ್ನು ಒಡ್ಡಿಕೊಂಡಂತೆಯೇ ಸರಿ. ರಾಂಗ್ ನಂಬರ್ ಮೂಲಕ ಹುಟ್ಟಿಕೊಂಡ ಸಂಬಂಧಗಳೆಲ್ಲವೂ ಹೀಗೆ ಸಮಸ್ಯೆಗಳನ್ನೇ ತಂದೊಡ್ಡುತ್ತವೆ ಎನ್ನಲಾಗದಿದ್ದರೂ ಆ ಸಾಧ್ಯತೆ ಹೆಚ್ಚು.

(ಜೂನ್ 2014, ಕನ್ನಡಪ್ರಭ)



# ಮೌಢ್ಯದ ಬೇರು ಸಡಿಲಗೊಳ್ಳುವುದೇ?

ಮೂಢನಂಬಿಕೆ ಪ್ರತಿಬಂಧಕ ಕಾಯ್ದೆ ಕುರಿತು ಕಳೆದ ಎರಡು ಮೂರು ವರ್ಷಗಳಿಂದ ಚರ್ಚೆ ನಡೆಯುತ್ತಿದೆ. ವೈಯಕ್ತಿಕ ಬದುಕಿನಲ್ಲಿ ಎದುರುಗೊಂಡ ಆತ್ಮೀಯರಿಬ್ಬರ ಅನುಭವಗಳು ಮೂಢನಂಬಿಕೆ ಪ್ರತಿಬಂಧಕ ಕಾಯ್ದೆ ಜಾರಿಯನ್ನು ಬಲವಾಗಿ ಸಮರ್ಥಿಸಿಕೊಳ್ಳುವಂತೆ ನನ್ನನ್ನು ಪ್ರೇರೇಪಿಸುತ್ತಿವೆ.

ಹತ್ತಿರದ ಸಂಬಂಧಿಯೊಬ್ಬರ ಮೈಮೇಲೆ ದೇವರು ಆಗಾಗ ಪ್ರತ್ಯಕ್ಷವಾಗುತ್ತಿತ್ತು. ಹಾಗೆ ಇದ್ದಕ್ಕಿದ್ದಂತೆ ಪ್ರತ್ಯಕ್ಷವಾಗುತ್ತಿದ್ದ ದೇವರು ಆ ವ್ಯಕ್ತಿಯ ಮೂಲಕ ಇನ್ನುಳಿದ ಹುಲುಮಾನವರಿಗೆ ಏನೇನೋ ಸೂಚನೆಗಳನ್ನು ನೀಡುತ್ತಿತ್ತು. ತನ್ನ ಮೈಮೇಲೆ ಬರುವ ದೇವರಿಂದ ಬಿಡುಗಡೆ ಪಡೆಯುವ ಸಲುವಾಗಿ ಅವರು, ಮೈಮೇಲೆ ದೇವರನ್ನು ಆವಾಹಿಸಿಕೊಳ್ಳುವ ಮತ್ತೊಬ್ಬನ ಮೊರೆ ಹೋದರು. ಈ ರೀತಿ ಮೈಮೇಲೆ ಬರುವ ದೇವರು-ದೆವ್ವಗಳನ್ನು ಬಡಿದೋಡಿಸುವುದು ಆ ವ್ಯಕ್ತಿಯ ಕಾಯಕವಾಗಿತ್ತು. ಅದಕ್ಕೊಂದು ಪುಟ್ಟ ಗುಡಿಯನ್ನೂ ಕಟ್ಟಿಕೊಂಡಿದ್ದ. ನಮ್ಮ ಸಂಬಂಧಿಯ ಮೈಮೇಲೆ ಆಗಾಗ ದೇವರು ಬರುವುದು, ಅವರು ಆ ಪೂಜಾರಿಯ ಬಳಿ ಹೋಗಿ ತಮ್ಮ ಈ ಸಮಸ್ಯೆ ಪರಿಹರಿಸುವಂತೆ ಬೇಡಿಕೊಳ್ಳುವುದು ನಡೆದೇ ಇತ್ತು. ಹೀಗೆ ಹತ್ತಾರು ವರ್ಷಗಳ ಕಾಲ ದೇವರು ಮೈಮೇಲೆ ಬರುವುದೆಂಬ ಮಾನಸಿಕ ಕ್ಷೋಭೆಗೊಳಗಾದ ಅವರು ಕಡೆಗೊಂದು ದಿನ ಆತ್ಮಹತ್ಯೆಯ ಹಾದಿ ಹಿಡಿದು ಬದುಕಿಗೆ ವಿದಾಯ ಹೇಳಿದರು.

---

ಸ್ನೇಹಿತನೊಬ್ಬನ ಬದುಕಿನಲ್ಲಿ ಜರುಗುತ್ತಿರುವ ಬೆಳವಣಿಗೆಗಳನ್ನು ಗಮನಿಸಿದಾಗಲೂ ಮನಸ್ಸಿಗೆ ಕಸಿವಿಸಿಯಾಗುತ್ತದೆ. ತನ್ನ ಭಾವನೆಗಳನ್ನು ಅರ್ಥೈಸಿಕೊಳ್ಳುವ ವ್ಯವಧಾನ ಮನೆಯವರಿಗಿಲ್ಲ. ತನ್ನ ಯಾವುದೇ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳುವುದು ಸಾಧ್ಯವಿಲ್ಲವೆಂದು ನಿರ್ಣಯಿಸಿದ ಅವನು ಮೂರ್ನಾಲ್ಕು ವರ್ಷಗಳ ಹಿಂದೆ ಆತ್ಮಹತ್ಯೆಗೆ ಯತ್ನಿಸಿದ್ದ. ಅದೃಷ್ಟವಶಾತ್ ಅವನ ಯತ್ನ ವಿಫಲಗೊಂಡು ಬದುಕಿಕೊಂಡ. ಮಗನ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ಮುಕ್ತ ಮನಸ್ಸು ಹೊಂದಿರದ ಅವನ ಪೋಷಕರಿಗೆ ಮಗ ಇದ್ದಕ್ಕಿದ್ದಂತೆ ಆತ್ಮಹತ್ಯೆ ಮಾಡಿಕೊಳ್ಳಲು ಮುಂದಾದದ್ದು ಬಿಡಿಸಲಾಗದ ಒಗಟಾಗಿ ಗೋಚರಿಸಿತು. ಇದಕ್ಕೆಲ್ಲ ಯಾವುದೋ ದೈವಶಕ್ತಿಯೇ ಕಾರಣವಿರಬಹುದೆಂದು ಬಲವಾಗಿ ನಂಬಿದ ಅವರು, ಇಂತಹ ವಿಚಾರಗಳ ಕುರಿತು ಸಾಕಷ್ಟು ತಿಳಿದುಕೊಂಡಿರುವೆನೆಂದು ತನ್ನನ್ನು ತಾನು ಬಿಂಬಿಸಿಕೊಳ್ಳುವ ವ್ಯಕ್ತಿಯೊಬ್ಬನ ಮೊರೆ ಹೋದರು. ಆತ 'ನಿಮ್ಮ ಮಗನ ಆತ್ಮಹತ್ಯೆ ಯತ್ನದ ಹಿಂದೆ ಕಾಣದ ಶಕ್ತಿಯೊಂದರ ಕೈವಾಡವಿದೆ. ಯಾವುದಕ್ಕೂ ಇನ್ನು ಕೆಲವು ದಿನ ಜಾಗ್ರತೆಯಿಂದಿರಿ. ಅಮಾವಾಸ್ಯೆ ದಿನಗಳಲ್ಲಿ ಮಗ ಹೊರಗೆಲ್ಲ ಹೆಚ್ಚೆಚ್ಚು ಅಡ್ಡಾಡದಿರುವಂತೆ ನೋಡಿಕೊಳ್ಳಿ' ಅಂತೆಲ್ಲ ಹೇಳಿದ. ಅವನ ಮಾತನ್ನು ಪೂರ್ಣವಾಗಿ ನಂಬಿದ ಸ್ನೇಹಿತನ ಪೋಷಕರು ಒಂದಷ್ಟು ವಿಶೇಷ ಪೂಜೆಗಳನ್ನು ಕೈಗೊಂಡು ಮಗನನ್ನು ಉಳಿಸಿಕೊಳ್ಳುವ ಯತ್ನ ಮಾಡಿದರು. ಸ್ವತಃ ಆರ್ಥಿಕವಾಗಿ ಸಂಕಷ್ಟ ಎದುರಿಸುತ್ತಿದ್ದರೂ ಇಂದಿಗೂ ದೇವರ ಕಾರ್ಯಗಳಿಗೆ ಸಾಲ ಮಾಡಿಯಾದರೂ ಹಣ ವ್ಯಯಿಸುತ್ತಲೇ ಇದ್ದಾರೆ. ಸ್ನೇಹಿತನ ಸಮಸ್ಯೆಗಳು ದಿನದಿಂದ ದಿನಕ್ಕೆ ಇನ್ನಷ್ಟು ಕಗ್ಗಂಟಾಗುತ್ತಿವೆ. ದೇವರ ಮೊರೆ ಹೋಗುತ್ತಿರುವ ಅವನ ಪೋಷಕರಿಗೆ ಮಗನ

ಅಸಲಿ ಸಮಸ್ಯೆಗಳಾದರೂ ಯಾವುವು ಎಂದು ತಾಳ್ಮೆಯಿಂದ ಕೇಳುವ ವ್ಯವಧಾನವೂ ಇಲ್ಲವಾಗಿದೆ.

ಸಂಬಂಧಿ ಮತ್ತು ಸ್ನೇಹಿತನ ಬದುಕಿನಲ್ಲಿ ಎದುರಾದ ಸಮಸ್ಯೆಗಳನ್ನು ಹತ್ತಿರದಿಂದ ಗಮನಿಸಿದ ನನಗೆ, ಇವರೆಲ್ಲ ದೇವರು ಅಥವಾ ದೇವರು-ದೆವ್ವಗಳೊಂದಿಗೆ ಅನುಸಂಧಾನ ನಡೆಸುತ್ತೇವೆಂದು ತಮ್ಮನ್ನು ತಾವು ಬಿಂಬಿಸಿಕೊಳ್ಳುವ ಪೂಜಾರಿಗಳೆಂಬ ಮಧ್ಯವರ್ತಿಗಳ ಮೊರೆ ಹೋಗದೆ ಮನೋವೈದ್ಯರ ಬಳಿ ತಪಾಸಣೆಗೆ ಒಳಪಟ್ಟಿದ್ದರೆ ಅವರ ಸಮಸ್ಯೆಗಳು ಬಗೆಹರಿಯುತ್ತಿದ್ದವೇನೊ ಎಂದೆನಿಸುತ್ತದೆ.

ಮೂಢನಂಬಿಕೆ ಪ್ರತಿಬಂಧಕ ಕಾಯ್ದೆ ಜಾರಿಯಾದ ಮಾತ್ರಕ್ಕೆ ಎಲ್ಲವೂ ಒಂದೇ ಏಟಿಗೆ ಬದಲಾಗಿ ಬಿಡುತ್ತದೆ. ದೇವರು-ದೆವ್ವಗಳ ಅವಕೃಪೆಗೆ ತುತ್ತಾಗಿದ್ದೇವೆಂದು ಭಾವಿಸಿಕೊಂಡು ಅಥವಾ ಬಿಂಬಿಸಿಕೊಂಡು ಹೋಗುತ್ತಿರುವವರ ಬದುಕಿನಲ್ಲಿ ನೆಮ್ಮದಿ ನೆಲೆಗೊಳ್ಳುತ್ತದೆ ಎನ್ನಲಾಗದಿದ್ದರೂ, ಈಗಿರುವ ಪರಿಸ್ಥಿತಿಯಲ್ಲಿ ಕೆಲವು ಸುಧಾರಣೆಗಳಾದರೂ ಸಾಧ್ಯವಾಗುತ್ತದೆ ಎಂಬ ಆಶಾಭಾವ ಹೊಂದಲು ಅಡ್ಡಿಯಿಲ್ಲ.

ಮೈಮೇಲೆ ಸ್ವತಃ ದೇವರನ್ನು ಬರಿಸಿಕೊಳ್ಳುತ್ತೇವೆ ಎಂದು ತಮ್ಮನ್ನು ತಾವು ಬಿಂಬಿಸಿಕೊಂಡು, ಜನರ ಸಕಲ ಸಮಸ್ಯೆಗಳಿಗೂ ಪರಿಹಾರ ಒದಗಿಸುವ ಸಲುವಾಗಿ ದೇವಸ್ಥಾನಗಳನ್ನು ತೆರೆದು ಮೌಢ್ಯ ಬಿತ್ತಿ, ಜನರ ನೆಮ್ಮದಿ ಹಾಳು ಮಾಡಿ ಹಣ ಸಂಪಾದಿಸುವವರ ಕೌರ್ಯಕ್ಕೆ ಕೊನೆ ಪಕ್ಷ ಕಾನೂನಿನ ಮೂಲಕವಾದರೂ ಅಂಕುಶ ಬೀಳುತ್ತದೆ. ಇಂತಹ ಕೇಂದ್ರಗಳು ಬಹಿರಂಗವಾಗಿ ತಲೆ ಎತ್ತಿ ನಿಲ್ಲದಂತಾದರೆ ಅದು ಕೂಡ ದೊಡ್ಡ ಮಟ್ಟದ ಸುಧಾರಣೆಯೇ.

ಕಾಯ್ದೆ ಜಾರಿಗಿಂತ ಜನರಲ್ಲಿ ಜಾಗೃತಿ ಮೂಡಿಸುವುದು ಮುಖ್ಯವೆಂಬ ವಾದ ಒಪ್ಪತಕ್ಕದ್ದೇ ಆದರೂ, ಹಾಗೆ ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಮೂಢನಂಬಿಕೆ ಪ್ರತಿಬಂಧಕ ಕಾಯ್ದೆಯ ಜಾರಿ ಮೊದಲ ಹೆಜ್ಜೆಯಾಗಬಹುದು.

'ನಂಬಿಕೆ-ಮೂಢನಂಬಿಕೆಯ ನಡುವೆ ತೆಳುವಾದ ಗೆರೆ ಇದೆ. ಜನರ ಭಾವನೆಗಳೊಂದಿಗೆ ಸರ್ಕಾರ ಆಟ ಆಡಬಾರದು. ಬಹುಸಂಖ್ಯಾತರ ಭಾವನೆಗಳನ್ನು ಗೌರವಿಸಬೇಕು' ಅಂತೆಲ್ಲ ಅಪಸ್ವರ ಎತ್ತುತ್ತಿರುವವರು, ಮನುಷ್ಯರ ನೆಮ್ಮದಿ ಕಸಿದುಕೊಳ್ಳುತ್ತಿರುವ, ಮಾನವ ಘನತೆಗೆ ಚ್ಯುತಿ ತರುವ, ಸಾವಿನ ಮನೆಗೆ ದೂಡುತ್ತಿರುವ ನಂಬಿಕೆಗಳೇ ಮೂಢನಂಬಿಕೆಗಳು ಎಂಬುದನ್ನು ಅರಿತೂ ಅರಿಯದಂತೆ ವರ್ತಿಸುತ್ತಿದ್ದಾರೆ.

ಇನ್ನು ಕೆಲವರು ತಮ್ಮ ಸ್ವಹಿತಾಸಕ್ತಿ ಸಾಧಿಸಿಕೊಳ್ಳುವ ಸಲುವಾಗಿಯೇ ಕಾಯ್ದೆ ಜಾರಿಗೆ ವಿರೋಧ ವ್ಯಕ್ತಪಡಿಸುತ್ತಿದ್ದಾರೆ. ಕಾಯ್ದೆಯಲ್ಲಿ ಏನಿದೆ ಏನಿಲ್ಲವೆಂದು ಪರಿಶೀಲಿಸುವ ವ್ಯವಧಾನ ತೋರದೆ, ಇದು ಎಡಪಂಥೀಯರ ಬುದ್ಧಿಜೀವಿಗಳ ಕುತಂತ್ರ ಅಂತೆಲ್ಲ ಬಿಂಬಿಸುವ ಪ್ರಯತ್ನ ಮಾಡುತ್ತಿದ್ದಾರೆ.

ಜನರ ಮನಸ್ಸಿಗೆ ನೆಮ್ಮದಿ ದಯಪಾಲಿಸುವಂತಹ ದೇವರು, ಧರ್ಮ ಮತ್ತು ಆಚರಣೆಗಳು ಇದ್ದಲ್ಲಿ ಸಮಸ್ಯೆಯಿಲ್ಲ. ಆದರೆ ಸಕಲ ಸಮಸ್ಯೆಗಳಿಗೂ ದೇವರ ಬಳಿಯೇ ಪರಿಹಾರವಿದೆ. ದೇವರನ್ನು ಒಲಿಸಿಕೊಳ್ಳಬೇಕೆಂದರೆ ತಾವು ಸೂಚಿಸಿದ್ದನ್ನೆಲ್ಲ ಮಾಡಬೇಕೆಂದು ನಂಬಿಸುವವರ ಅಟಾಟೋಪಕ್ಕೆ ಕಡಿವಾಣ ವಿಧಿಸಲೇಬೇಕಿದೆ.

ಮೇಲ್ನೋಟಕ್ಕೆ ಕೇವಲ ಜನರ ನಂಬಿಕೆ ಮತ್ತು ಭಾವನೆಗಳಿಗೆ ಸಂಬಂಧಿಸಿದಂತೆ ಗೋಚರಿಸುವ ಧಾರ್ಮಿಕ ಆಚರಣೆಗಳು, ಹಲವರ ಬದುಕನ್ನೇ ಕಸಿದುಕೊಳ್ಳುವಷ್ಟು ಪ್ರಬಲವಾಗಿವೆ. ಧರ್ಮ ರಕ್ಷಣೆ ಎಂದರೆ, ಆಯಾ ಧರ್ಮಗಳ ಭಾಗವಾಗಿರುವ ಮೌಢ್ಯಗಳನ್ನು ಹಾಗೆಯೇ ಉಳಿಸಿಕೊಳ್ಳುವ ಭಂಡತನವಲ್ಲ ಎಂಬುದನ್ನು ಸ್ವಯಂ ಘೋಷಿತ ಧರ್ಮ ರಕ್ಷಕರು ಅರಿತುಕೊಳ್ಳಬೇಕಿದೆ.

ಯಾವುದೇ ವಾದ-ವಿವಾದ, ಸಿದ್ಧಾಂತಗಳಿಗೂ ತಮ್ಮನ್ನು ತೆರೆದುಕೊಳ್ಳದೇ ತಮ್ಮ ಪಾಡಿಗೆ ತಾವು ದೇವರನ್ನು ಒಲಿಸಿಕೊಳ್ಳುವ ಮೂಲಕ ತಮ್ಮ ಸಂಕಷ್ಟಗಳಿಂದ ಪಾರಾಗಲು ಹಂಬಲಿಸುವವರ ಮುಗ್ಧತೆಯನ್ನೇ ಬಂಡವಾಳ ಮಾಡಿಕೊಂಡು ಬದುಕುತ್ತಿರುವವರ ಬುಡ ಅಲುಗಿಸುವಲ್ಲಿ ಈ ಕಾಯ್ದೆ ಸ್ವಲ್ಪ ಮಟ್ಟಿಗಾದರೂ ಯಶ ಕಾಣಬಹುದೇನೊ ಅನ್ನುವ ಆಶಾಭಾವದೊಂದಿಗೆ ಕಾಯ್ದೆಯ ಪರ ದನಿ ಎತ್ತಬಹುದಲ್ಲವೇ?

(ಜುಲೈ 2016, ಗೌರಿ ಲಂಕೇಶ್)



## ಮುಖಪುಟದ ವಿಕೃತ ಮುಖಗಳು

ಮೊನ್ನೆ ಮಧ್ಯಾಹ್ನ ಗೆಳತಿ ಕಾಲ್ ಮಾಡಿ, 'ಫೇಸ್ಬುಕ್ನಲ್ಲಿ ಯಾವುದೋ ಒಂದು ಅಶ್ಲೀಲ ವಿಡಿಯೋಗೆ ನನ್ನನ್ನು ಟ್ಯಾಗ್ ಮಾಡಿದ್ದಾರಂತೆ. ಅದೇನೂಂತ ನೋಡಿ ನಂಗೆ ಹೇಳ್ತೋ. ಈಗ ನಾನಿರುವ ಸ್ಥಳದಲ್ಲಿ ಇಂಟರ್ನೆಟ್ ಸೌಲಭ್ಯವಿಲ್ಲ. ನಂಗಂತೂ ತುಂಬಾ ಬೇಜಾರಾಗ್ತಿದೆ. ಬೆಳಿಗ್ಗೆಯಿಂದ ಫ್ರೆಂಡ್ಸೆಲ್ಲ ಕಾಲ್ ಮಾಡಿ ಆ ವಿಡಿಯೋ ರಿಮೂವ್ ಮಾಡು ಅಂತ ಹೇಳ್ತಿದ್ದಾರೆ' ಅಂದಳು.

ಅವಳ ಮಾತಿಗೆ ಇದೇನು ಸಮಸ್ಯೆಯೇ ಅಲ್ಲ ಎನ್ನುವ ಧಾಟಿಯಲ್ಲಿ ಪ್ರತಿಕ್ರಿಯಿಸಿದ ನಾನು, 'ಇದೆಲ್ಲ ವೈರಸ್ ಅಥವಾ ಹ್ಯಾಕಿಂಗ್ ಮಹಿಮೆ. ನಿನ್ನ ಫ್ರೆಂಡ್ಸ್ ಲಿಸ್ಟ್ನಲ್ಲಿರುವ ಯಾರದೋ ಅಕೌಂಟ್ ಹ್ಯಾಕ್ ಆಗಿರುತ್ತೆ. ಅವರು ಕೂಡ ಬೇಕಂತಲೇ ಆ ವಿಡಿಯೋಗೆ ನಿನ್ನ ಹೆಸರು ಟ್ಯಾಗ್ ಮಾಡಿರುವುದಿಲ್ಲ. ಫೇಸ್ಬುಕ್ ಬಳಸುವವರಿಗೆ ಇದೆಲ್ಲ ಗೊತ್ತಿರುತ್ತೆ. ಯಾರೂ ನಿನ್ ಬಗ್ಗೆ ತಪ್ಪು ತಿಳ್ಕೊಳ್ಳಲ್ಲ ಬಿಡು' ಅಂತ ಸಮಾಧಾನ ಹೇಳಿ, ಅಸಲಿ ಸಮಾಚಾರ ಏನೆಂದು ತಿಳಿಯಲು ನನ್ನ ಫೇಸ್ಬುಕ್ ಅಕೌಂಟ್ಗೆ ಲಾಗಿನ್ ಆದೆ.

ಆ ದಿನ ಹಲವರಿಗೆ ಇದೇ ಅನುಭವವಾಗಿತ್ತು. ತಮಗರಿವಿಲ್ಲದಂತೆ ತಮ್ಮ ಟೈಮ್ಲೈನ್ ಮೇಲೆ ಅಶ್ಲೀಲ ವಿಡಿಯೋಗಳು ಬಿತ್ತರವಾಗುತ್ತಿದ್ದವು. ಕೆಲವರು ಆಗಲೇ ತಮ್ಮ ಫೇಸ್ಬುಕ್ ಗೆಳೆಯರಿಗೆ ಅಸಲಿ ವಿಷಯ ಏನೆಂದು ಮನವರಿಕೆ ಮಾಡಿಕೊಡುವ ಸಲುವಾಗಿ ಟಿಪ್ಪಣಿಗಳನ್ನು ಬರೆದಿದ್ದರು.

ಗೆಳತಿಗೆ ಕಾಲ್ ಮಾಡಿ, 'ಇದು ನಿನ್ನೊಬ್ಬಳಿಗೆ ಮಾತ್ರ ಆಗಿರೋದಲ್ಲ. ಹಲವರ ವಾಲ್ ಮೇಲೂ ಅಶ್ಲೀಲ ವಿಡಿಯೋಗಳು ಹರಿದಾಡ್ತಿವೆ. ನೆಕ್ಸ್ಟ್ ಫೇಸ್ಬುಕ್ ಅಕೌಂಟ್ಗೆ

ಲಾಗಿನ್ ಆದಾಗ್ಲೂ ಆ ವಿಡಿಯೋ ಹಂಗೇ ಇದ್ರೆ ರಿಮೂವ್ ಮಾಡಿ, ಯಾರು ನಿನ್ನ ಟ್ಯಾಗ್ ಮಾಡಿರೋದು ಅಂತ ತೋರ್ಸುತ್ತೋ ಅವರನ್ನ ಬ್ಲಾಕ್ ಮಾಡು' ಅಂತ ಸಲಹೆ ನೀಡಿದೆ. ಆದರೂ ಅವಳ ಆತಂಕ ಕಡಿಮೆ ಆದಂತೆ ತೋರಲಿಲ್ಲ.

ಅದೇ ದಿನ ಸಂಜೆ ನನ್ನ ಗೆಳೆಯನೊಬ್ಬ ಕಾಲ್ ಮಾಡಿ, 'ನಿನ್ನ ಫೇಸ್ಬುಕ್ ಅಕೌಂಟ್ ನೋಡಿದ್ಯಾ..!? ಮೊದ್ಲು ನೋಡು ಮಾರಾಯ' ಅಂತ ಆಜ್ಞಾಪಿಸಿದ. ಏನ್ ವಿಷ್ಯನೋ ಅಂತ ಕೇಳಿದೆ. 'ನಿನ್ ಹೆಸ್ರಲ್ಲಿ ಕೆಟ್ಟಕೆಟ್ಟ ವಿಡಿಯೋಗಳು ಹರಿದಾಡ್ತಿವೆ. ಮೊದ್ಲು ಅವುನ್ನೆಲ್ಲ ಡಿಲೀಟ್ ಮಾಡಪ್ಪ' ಅಂದ.

ನಾನು, 'ಇತ್ತೀಚೆಗೆ ಹೀಗೆ ಅಶ್ಲೀಲ ವಿಡಿಯೋಗಳಿಗೆ ನಮ್ಮ ಹೆಸರು ಟ್ಯಾಗ್ ಆಗೋದು ಕಾಮನ್ನು ಬಿಡು. ಆದ್ರೂ ನೋಡಿ ಆ ವಿಡಿಯೋ ರಿಮೂವ್ ಮಾಡ್ತೀನಿ' ಅಂತಂದೆ. ನಾನು ಲಾಗಿನ್ ಆಗಿ ನೋಡುವಷ್ಟರಲ್ಲಿ ಆ ವಿಡಿಯೋ ನಾಪತ್ತೆಯಾಗಿತ್ತು. ಆದರೂ ನನ್ನ ಕೆಲ ಗೆಳೆಯರು, ವಿಡಿಯೋವನ್ನು ನಾನೇ ಬೇಕಂತಲೇ ಫೇಸ್ಬುಕ್ನಲ್ಲಿ ಹಾಕಿದ್ದೀನೇನೊ ಎಂಬಂತೆ ಪ್ರತಿಕ್ರಿಯಿಸಿದರು.

ಗೆಳತಿಗೆ ಆದ ಅನುಭವವೇ ನನಗೂ ಆದಾಗ, ಅವಳು ಯಾಕಷ್ಟು ತಲೆ ಕೆಡಿಸಿಕೊಂಡಿದ್ದಾಳೆ ಅನ್ನೋದಕ್ಕೆ ಕಾರಣ ತಿಳಿಯಿತು. ತಮ್ಮ ಫೇಸ್ಬುಕ್ಕಿನ ವಾಲ್ನಲ್ಲಿ ಸಂಭಾವಿತರ ಮುಖವಾಡ ತೊಟ್ಟು, ಎಲ್ಲದಕ್ಕೂ ಪ್ರತಿಕ್ರಿಯಿಸಿ ತಮ್ಮನ್ನು ತಾವು ಸಮಾಜಮುಖಿ ಎಂದು ಬಿಂಬಿಸಿಕೊಳ್ಳುವ ಕೆಲವರು, ತನಗೆ ಕಳುಹಿಸುವ ತರಹೇವಾರಿ ಮೆಸೇಜುಗಳಿಂದ ಮೊದಲೇ ರೋಸಿ ಹೋಗಿದ್ದ ಅವಳಿಗೆ, ತನ್ನ ಹೆಸರಿನೊಂದಿಗೆ ಟ್ಯಾಗ್ ಆಗಿರುವ ವಿಡಿಯೋ ಗಮನಿಸಿ ಇನ್ನೆಷ್ಟು ಅತೃಪ್ತ ಆತ್ಮಗಳು ತಮ್ಮ ಮೆಸೇಜುಗಳ ಮೂಲಕ ಚೇರಾಡಲಾರಂಭಿಸುತ್ತವೆಯೋ ಎನ್ನುವ ಆತಂಕ ಕಾಡುತ್ತಿತ್ತು.

‘ಇದು ನಿನ್ನೊಬ್ಬಳ ಸಮಸ್ಯೆ ಅಲ್ಲ. ಅತೃಪ್ತ ಆತ್ಮಗಳು ಬಹುತೇಕ ಎಲ್ಲರ ಬಳಿಯೂ ಎಡತಾಕುತ್ತಿರುತ್ತವೆ. ಅಂತಹವರನ್ನು ಅನ್ಫ್ರೆಂಡ್ ಮತ್ತು ಬ್ಲಾಕ್ ಮಾಡಿ ನಿನ್ನ ಪಾಡಿಗೆ ನೀನಿರು’ ಅಂತಂದೆ. ಆದರೂ ಅವಳ ಮನಸ್ಸಿನ ದುಗುಡ ಕಡಿಮೆಯಾದಂತೆ ತೋರಲಿಲ್ಲ.

ಹೊರಜಗತ್ತಿಗೆ ಸಂಭಾವಿತರಾಗಿ ಒಳಜಗತ್ತಿನಲ್ಲಿ ಉಪದ್ರವಕಾರಿಯಾಗಿ ವರ್ತಿಸುವವರ ಹಾವಳಿಯಿಂದ ಅದಾಗಲೇ ರೋಸಿ ಹೋದ ಕೆಲವರು, ಆಗಾಗ ಅತೃಪ್ತ ಆತ್ಮಗಳ ಜನ್ಮ ಜಾಲಾಡುವ ಪೋಸ್ಟುಗಳನ್ನು ಹರಿಬಿಡುತ್ತಿದ್ದನ್ನು ಗಮನಿಸಿದ್ದ ನಾನು, ಬೇರೆಯವರ ಅನುಭವಗಳನ್ನು ಉದಾಹರಿಸಿ, ‘ಹೀಗಾಗುತ್ತಿರುವುದು ನಿನ್ನೊಬ್ಬಳಿಗೆ ಮಾತ್ರವಲ್ಲ. ಅಂತಹವರ ಬಗ್ಗೆ ಜಾಸ್ತಿ ತಲೆ ಕೆಡಿಸಿಕೊಳ್ಳಬೇಡ’ ಅಂತಂದು ಸುಮ್ಮನಾದೆ.

ಒಂದುವೇಳೆ ಇದೆಲ್ಲವನ್ನೂ ಅರಗಿಸಿಕೊಳ್ಳಲು ಸಾಧ್ಯವಾಗದಿದ್ದರೆ, ಸುಮ್ಮನೆ ಫೇಸ್ಬುಕ್ ಅಕೌಂಟ್ ಡಿಆಕ್ಟಿವೇಟ್ ಮಾಡಿಬಿಡು ಅಂದೆ.

ಆನಂತರ ಸಮಸ್ಯೆಯ ತಳಪಾಯಕ್ಕೆ ಕೈ ಹಾಕದೆ, ಗೋಡೆಗಳಿಗೆ ಬಣ್ಣ ಬಳಿಯುವ ನಮ್ಮಂತಹವರ ಮನಸ್ಥಿತಿಯಲ್ಲೇ ಏನೋ ಐಬಿದೆ ಅನಿಸಲಾರಂಭಿಸಿತು. ಗೆಳತಿಯ 'ಮುಖಪುಟ'ದ ಸಮಸ್ಯೆಗಳಿಗೆ ಕಾರಣರಾದವರು ಫೇಸ್ಬುಕ್ನಲ್ಲಿ ಕೊನೆಯವರೆಗೂ ಸಕ್ರಿಯರಾಗಿರುತ್ತಾರೆ. ಅವರಿಂದ ಮಾನಸಿಕ ಹಿಂಸೆ ಅನುಭವಿಸುವವರ ಪಟ್ಟಿಗೆ ಹೊಸ ಹೆಸರುಗಳ ಸೇರ್ಪಡೆ ಆಗುತ್ತಲೇ ಇರುತ್ತದೆ. ತೀರಾ ಯಾರಾದರೂ ಕ್ಯಾಕರಿಸಿ ಉಗಿದರೂ, ಏನೇನೋ ನೆಪ ಹೇಳಿ ಅಥವಾ ಒಂದಷ್ಟು ದಿನ ಇದ್ದೂ ಇಲ್ಲದಂತೆ ಸುಮ್ಮನಿದ್ದು ಆನಂತರ ಮತ್ತೆ ತಮ್ಮ ಹಳೆ ಚಾಳಿ ಮುಂದುವರೆಸುತ್ತಾರೆ.

ಆದರೆ ಅವರ ವಿಕೃತ ಮುಖ ಕಂಡು ರೋಸಿ ಹೋದವರು, ಒಂದೋ ಅವರನ್ನು ಎದುರಿಸಬೇಕು ಅಥವಾ ಫೇಸ್ಬುಕ್ಕಿನಿಂದಲೇ ನಿರ್ಗಮಿಸಬೇಕು.

ಮೊದಲನೇ ಆಯ್ಕೆ ಸೂಕ್ತವಾದರೂ ಅದು ಎಲ್ಲರಿಂದಲೂ ಸಾಧ್ಯವಿಲ್ಲ. ಹಾಗಾಗಿ ಸಮಸ್ಯೆಯ ಮೂಲವಾದ 'ಅತೃಪ್ತ ಆತ್ಮ'ಗಳಿಗೆ ಚಿಕಿತ್ಸೆ ನೀಡಬೇಕಿದೆ: ಅದು ಶಿಕ್ಷೆಯ ರೂಪದಲ್ಲೂ ಇರಬಹುದು.

(ಆಗಸ್ಟ್ 2015, ಉದಯವಾಣಿ)



# ನೆಮ್ಮದಿ ಕಸಿದುಕೊಳ್ಳುವ 'ಜನರೇಷನ್ ಗ್ಯಾಪ್'

ಹಬ್ಬಕ್ಕೆಂದು ಊರಿಗೆ ಬಂದಿದ್ದ ಸ್ನೇಹಿತನಿಗೆ 'ಬೆಂಗ್ಳೂರಿಗೆ ಯಾವಾಗ ವಾಪಸ್ ಹೋಗ್ತಿಯಪ್ಪ' ಅಂತ ಕೇಳಿದ್ದಕ್ಕೆ, 'ಆ ವಿಷ್ಯನಾ ಈಗ್ಲೆ ಯಾಕೆ ಕೆದಕ್ತೀಯ? ಬೆಂಗಳೂರಿನ ಬದುಕು ನೆನೆದರೆ ಬೇಜಾರಾಗುತ್ತೆ. ಅಲ್ಲಿದ್ದಷ್ಟೂ ದಿನ ಮತ್ತೆ ಯಾವಾಗ ನಮ್ಮೂರಿಗೆ ಹೋಗ್ತಿನೋ ಅನ್ಸುತ್ತೆ' ಅಂದ.

ಐದಾರು ವರ್ಷಗಳ ಹಿಂದೆ ಎಂಜಿನಿಯರಿಂಗ್ ಮುಗಿದ ನಂತರ ಕೆಲಸ ಅರಸಿ ಬೆಂಗಳೂರಿಗೆ ಹೋದವನು ಇಂದಿಗೂ ಅಲ್ಲಿನ ಜೀವನಶೈಲಿಗೆ ಹೊಂದಿಕೊಳ್ಳಲಾಗದೆ ಪರಿತಪಿಸುತ್ತಿದ್ದಾನೆ.

---

ವಯಸ್ಸು ಮೂವತ್ತೈದರ ಗಡಿ ದಾಟಿದರೂ ಮದುವೆಯಾಗಲು ಸಾಧ್ಯವಾಗದ ಸಂಕಟದಿಂದ ನರಳುತ್ತಿರುವ ಸ್ನೇಹಿತನೊಬ್ಬನ ನೋವು ಮನೆಯವರಿಗೆ ಅರ್ಥವಾಗುತ್ತಿಲ್ಲ. ಸ್ವಜಾತಿಯ ಹುಡುಗಿಯನ್ನೇ ಮದುವೆಯಾಗಬೇಕೆಂದು ಮನೆಯವರು ಜಿದ್ದಿಗೆ ಬಿದ್ದಿದ್ದಾರೆ. ಆದರೆ ಅವನ ಓದು ಮತ್ತು ದುಡಿಮೆಗೆ ನೆಚ್ಚಿಕೊಂಡಿರುವ ಕೆಲಸ ಗಮನಿಸಿಯೂ ಮದುವೆಗೆ ಒಪ್ಪುವ ವಧು ಅವರ ಜಾತಿಯಲ್ಲಿ ಸಿಗದಿರುವ ಕಾರಣ ದಿನದಿಂದ ದಿನಕ್ಕೆ ಅವನೊಳಗೆ ಹತಾಶೆಯ ಕಾರ್ಮೋಡವೇ ಕವಿಯುತ್ತಿದೆ.

---

'ಜನರೇಷನ್ ಗ್ಯಾಪ್' ಎಂಬುದು ಕೇವಲ ತೊಡುವ ದಿರಿಸು, ಮಾತನಾಡುವ ಶೈಲಿ, ಬಳಸುವ ವಸ್ತುಗಳಿಗೆ ಮಾತ್ರ ಸೀಮಿತವಾಗಿದೆಯೇನೊ ಎಂದುಕೊಳ್ಳುವ

ಹೊತ್ತಿಗಾಗಲೇ ಅಸಲಿಗೂ ಅಸ್ತಿತ್ವದಲ್ಲಿರುವ 'ಆಲೋಚನೆ'ಗಳಿಗೆ ಸಂಬಂಧಿಸಿದ ಜನರೇಷನ್ ಗ್ಯಾಪ್ನೆಡೆಗೆ ಗಮನ ಹರಿಯುತ್ತದೆ.

ಹಣ, ಆಸ್ತಿ ಮತ್ತು ಮಾನ-ಮರ್ಯಾದೆ ಗಳಿಸಿ ಉಳಿಸಿಕೊಂಡು ಹೋಗುವುದೇ ಬದುಕಿನ ಪರಮ ಗುರಿ ಎಂದುಕೊಂಡವರ ನಡುವೆ ಸಿಲುಕಿ ನರಳುತ್ತಿರುವವರ ಸುತ್ತ ಈ 'ಜನರೇಷನ್ ಗ್ಯಾಪ್' ಎಂಬುದು ಎದ್ದು ಕಾಣುತ್ತಿದೆ. ಹಣ ಗಳಿಸಿಯೂ ನೆಮ್ಮದಿಯ ಬದುಕು ಕಟ್ಟಿಕೊಳ್ಳಲು ಸಾಧ್ಯವಾಗದೆ ಮಹಾನಗರಗಳಲ್ಲಿ ಹೆಣಗುತ್ತಿರುವವರ ಒಡಲಲ್ಲಿ ಮಿಸುಕಾಡುತ್ತಿರುವ, ತಮ್ಮ ಊರಲ್ಲೇ ಏನಾದರೂ ಮಾಡಿಕೊಂಡು ಬದುಕಬೇಕೆಂಬ ತುಡಿತ ಹಿರಿಯರ ತುಳಿತಕ್ಕೆ ಸಿಲುಕಿ ತೊಳಲಾಡುತ್ತಿದೆ. ಜಾಗತೀಕರಣಕ್ಕೆ ತೆರೆದುಕೊಂಡು ಎಲ್ಲೆಲ್ಲಿಂದಲೋ ಬಂದವರೊಡನೆಲ್ಲ ಒಡನಾಡುವ ಸದಾವಕಾಶ ಪಡೆದುಕೊಂಡೂ ತಾವು ಪ್ರೀತಿಸಿದವರನ್ನು ವರಿಸಲಾರದೆ ಚಡಪಡಿಸುತ್ತಿರುವ ಯುವ ಸಮುದಾಯವನ್ನೂ ಈ ಜನರೇಷನ್ ಗ್ಯಾಪ್ ಹೆಚ್ಚು ಬಾಧಿಸುತ್ತಿದೆ.

ಮುಂದೆ ತಮ್ಮ ಮಕ್ಕಳಾದರೂ ಮನೆ ಕಟ್ಟಿಕೊಳ್ಳಲಿ ಎಂಬ ಮಹದಾಸೆಯಿಂದ ನಗರಗಳ ಒಡಲು ಹಿಗ್ಗಿಸಿಕೊಂಡು ಬೆಳೆಯುತ್ತಿರುವ ಬಡಾವಣೆಗಳಲ್ಲಿ ಸೈಟು ಕೊಂಡು ನಿರಾಳರಾದವರಿಗೆ, ತಮ್ಮ ಮಕ್ಕಳು ಎದುರಿಸುತ್ತಿರುವ ಅಸಲಿ ಸಮಸ್ಯೆಗಳ ಕುರಿತು ಚಿಂತಿಸುವ ವ್ಯವಧಾನವಾದರೂ ಇದೆಯೇ? ನಗರಗಳು ವಿಸ್ತಾರಗೊಳ್ಳುತ್ತಿರುವ ವೇಗದಲ್ಲಿಯೇ ಮನುಷ್ಯರ ಮನಸ್ಸುಗಳು ಸಂಕುಚಿತಗೊಳ್ಳುತ್ತಿರುವ ಸೂಚನೆ ನಮಗಿನ್ನೂ ಸಿಕ್ಕಿಲ್ಲವೇ?

(ಫೆಬ್ರವರಿ 2016, ಕನ್ನಡಪ್ರಭ)



# ಜಯಂತಿ ಆಚರಿಸಿ ಸರ್ಕಾರ ಸಾಧಿಸಿದ್ದೇನು?

ಒಂದು ಸಮುದಾಯ ಅಥವಾ ಜಾತಿಯ ಜನರ ಮತಗಳ ಮೇಲೆ ಕಣ್ಣಿಟ್ಟು ಆಚರಿಸಲು ಮುಂದಾದ ಜಯಂತಿಗಳೆಲ್ಲವೂ ಜಾತಿ ವ್ಯವಸ್ಥೆಯ ಬೇರುಗಳನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ತಮ್ಮದೇ ಆದ ಕೊಡುಗೆಗಳನ್ನು ನೀಡಲಾರಂಭಿಸಿವೆ. ಇತ್ತೀಚೆಗೆ ಆಯೋಜನೆಗೊಳ್ಳುತ್ತಿರುವ ಕನಕ, ವಾಲ್ಮೀಕಿ ಅಥವಾ ಟಿಪ್ಪು ಜಯಂತಿಗಳ ಆಚರಣೆಯಲ್ಲಿ ಪಾಲ್ಗೊಳ್ಳಲು ಉತ್ಸಾಹ ತೋರಿದವರು ಮತ್ತು ತೋರುವವರು ಯಾರೆಂಬುದನ್ನು ಗಮನಿಸಿದರೂ ಇದು ಮನದಟ್ಟಾಗುತ್ತದೆ. ಬಸವ ಜಯಂತಿಯಿಂದಿಡಿದು ಇತ್ತೀಚಿನ ಟಿಪ್ಪು ಜಯಂತಿವರೆಗೆ ಎಲ್ಲ ಜಯಂತಿಗಳ ಆಚರಣೆಯ ಸಂದರ್ಭದಲ್ಲೂ ಆಯಾ ಜಯಂತಿ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಳ್ಳುವವರು ಹೇಳುವ ಮಾತು 'ಬಸವಣ್ಣ ಅಥವಾ ಕನಕದಾಸರು ಅಥವಾ ವಾಲ್ಮೀಕಿ ಅಥವಾ ಟಿಪ್ಪುವನ್ನು ಒಂದು ಜಾತಿ ಅಥವಾ ಸಮುದಾಯಕ್ಕೆ ಸೀಮಿತಗೊಳಿಸುವುದು ಬೇಡ. ಅವರ ತತ್ವಾದರ್ಶ, ಚಿಂತನೆಗಳು ಇಡೀ ಸಮಾಜಕ್ಕೆ ದಾರಿದೀಪ' ಎನ್ನುವುದೇ ಆಗಿರುತ್ತದೆ.

ವಿಪರ್ಯಾಸವೆಂದರೆ ಹಲವು ವರ್ಷಗಳಿಂದ ಹೀಗೆ ಹೇಳಿಕೊಂಡು ಬಂದೇ, ಜಯಂತಿಗಳ ಆಚರಣೆ ಸಂದರ್ಭದಲ್ಲಿ ಸ್ಮರಿಸಲಾಗುವ ವ್ಯಕ್ತಿಗಳನ್ನೆಲ್ಲ ಆಯಾ ಜಾತಿ ಅಥವಾ ಸಮುದಾಯದ ಬ್ರ್ಯಾಂಡ್ ಅಂಬಾಸಿಡರ್ಗಳಾಗಿ ಬಿಂಬಿಸುತ್ತಿದ್ದೇವೆ.

ತಮ್ಮ ವೈಯಕ್ತಿಕ ಹಿತಾಸಕ್ತಿ ಅಥವಾ ಜಾತಿ ಅಭಿಮಾನದಿಂದಾಗಿ ಜಾತಿ ಅಥವಾ ಧರ್ಮದ ಹೆಸರಿನಲ್ಲಿ ಸಂಘಟನೆಗಳನ್ನು ಕಟ್ಟಿಕೊಂಡು ಮೆರೆಯಲಾರಂಭಿಸಿರುವವರ ಪಾಲಿಗೆ ಮಾತ್ರ ಈ ಜಯಂತಿಗಳು ವರದಾನವಾಗಿವೆ. ವ್ಯಕ್ತಿ ಕೇಂದ್ರಿತ

ಜಯಂತಿಗಳ ಆಚರಣೆಯಿಂದ ವ್ಯಕ್ತಿ ಪೂಜೆಯ ಪ್ರವೃತ್ತಿ ಬೆಳೆಯುತ್ತಿದೆಯೇ ಹೊರತು, ಅವರು ತಮ್ಮ ಜೀವಿತಾವಧಿಯಲ್ಲಿ ಬೋಧಿಸಿದ ಮತ್ತು ಬೋಧಿಸಿದರೆಂದು ಬಿಂಬಿಸಲಾದ ವಿಚಾರಗಳ ಅಳವಡಿಕೆಗೆ ಯಾರೂ ಮನಸ್ಸು ಮಾಡುವ ಮನಸ್ಥಿತಿಯನ್ನೇ ಹೊಂದಿಲ್ಲ.

ವ್ಯಕ್ತಿ ಕೇಂದ್ರಿತ ಜಯಂತಿಗಳ ಆಚರಣೆಯೇ ನಿರರ್ಥಕವೆಂಬಂತೆ ಭಾಸವಾಗುತ್ತಿರುವ ವೇಳೆಯಲ್ಲಿಯೇ ಸರ್ಕಾರವೇ ಮುಂದೆ ನಿಂತು ಹೊಸ ಹೊಸ ಜಯಂತಿಗಳನ್ನು ಹುಟ್ಟು ಹಾಕಿ ಅನಗತ್ಯ ವಿವಾದಗಳನ್ನು ಮೈಮೇಲೆ ಎಳೆದುಕೊಳ್ಳುವುದರ ಜೊತೆಗೆ, ಎಲ್ಲಾ ಧರ್ಮಗಳಲ್ಲಿನ ಮೂಲಭೂತವಾದಿಗಳು ಮತ್ತು ಜಾತಿ ಅಭಿಮಾನಿಗಳ ಕೈ ಮೇಲಾಗುವಂತೆ ವರ್ತಿಸುತ್ತಿರುವುದು ನಾಚಿಕೆಗೇಡು.

ಇತ್ತೀಚೆಗೆ ಆಚರಿಸಲ್ಪಟ್ಟ ಟಿಪ್ಪು ಜಯಂತಿಯಿಂದ ಟಿಪ್ಪು ಸುಲ್ತಾನ್ ವ್ಯಕ್ತಿತ್ವದ ಹಿರಿಮೆ ಹೆಚ್ಚುವ ಬದಲು ಎರಡು ಗುಂಪುಗಳ ನಡುವೆ ಪರಸ್ಪರ ಕೆಸರೆರಚಾಟ ಮತ್ತು ಮಾರಾಮಾರಿಗೆ ಅದು ಅನುವು ಮಾಡಿಕೊಟ್ಟಿತು. ವ್ಯಕ್ತಿಯನ್ನು ಅವನೆಲ್ಲ ದೌರ್ಬಲ್ಯಗಳೊಂದಿಗೆ ಒಪ್ಪಿಕೊಳ್ಳುವ ಅಥವಾ ಗಮನಿಸುವ ಸಮಚಿತ್ತ ಕಳೆದುಕೊಳ್ಳುತ್ತಿರುವ ಸಮಾಜಕ್ಕೆ, ಇತಿಹಾಸದಲ್ಲಿ ದಾಖಲಾದವರೆಲ್ಲರೂ ಒಂದೋ ಹೀರೊಗಳಾಗಿರಬೇಕು ಅಥವಾ ಖಳನಾಕರೇ ಆಗಿರಬೇಕೆಂಬ ಪೂರ್ವಗ್ರಹವೇ ಅಂತಿಮ ಸತ್ಯವೆಂಬಂತೆ ತೋರುತ್ತಿದೆ. ಟಿಪ್ಪು ಸುಲ್ತಾನ್ ಜಯಂತಿಯ ಆಚರಣೆ ವೇಳೆ ನಡೆದ ವಾಗ್ವಾದಗಳು ಕೂಡ ಇದನ್ನೇ ಪುಷ್ಟೀಕರಿಸಿದವು. 'ಮೈಸೂರು ಹುಲಿ'ಯಾಗಷ್ಟೇ ನಮ್ಮಂತಹ ವಿಜ್ಞಾನ ಮತ್ತು ತಂತ್ರಜ್ಞಾನ ವಿದ್ಯಾರ್ಥಿಗಳಿಗೆ ಪರಿಚಿತರಾಗಿದ್ದ ಟಿಪ್ಪು ಸುಲ್ತಾನ್ ಕುರಿತು ಒಂದೆಡೆ ವಸ್ತುನಿಷ್ಠ ಚರ್ಚೆಗಳು ನಡೆದರೆ,

ಮತ್ತೊಂದೆಡೆ ಪೂರ್ಣ ಪ್ರಮಾಣದ ದುಷ್ಟ ವ್ಯಕ್ತಿಯಾಗಿ ಬಿಂಬಿಸುವ ಪ್ರಯತ್ನವೂ ನಡೆಯಿತು.

ಅಂತಿಮವಾಗಿ ಟಿಪ್ಪು ಜಯಂತಿ ಆಚರಣೆಗೆ ಇನ್ನಿಲ್ಲದ ಉತ್ಸಾಹ ತೋರುವ ಮೂಲಕ ಸರ್ಕಾರ ಸಾಧಿಸಿದ್ದಾದರೂ ಏನನ್ನು ಎಂಬ ಪ್ರಶ್ನೆ ನನ್ನಂತಹ ಸಾಮಾನ್ಯರನ್ನು ಕಾಡುತ್ತಿದೆ.

(ಡಿಸೆಂಬರ್ 2015, ಕನ್ನಡಪ್ರಭ)



## ವಿದ್ಯಾರ್ಥಿಗಳಲ್ಲಿ ಸಾಮಾಜಿಕ ಪ್ರಜ್ಞೆ ಮೂಡುವುದು ಅಪರಾಧವೇ?

ವಿಶ್ವವಿದ್ಯಾಲಯಗಳ ಆವರಣದೊಳಗೆ ಪಕ್ಷ ರಾಜಕೀಯ ನುಸುಳಲು ಬಿಡಬಾರದೆಂದು ನಿರ್ಬಂಧಿಸಲು ಹೊರಡುವುದು ಮೇಲ್ನೋಟಕ್ಕೆ ಸರಿ ಎನಿಸಿದರೂ, ಕಾಲೇಜು ವಿದ್ಯಾರ್ಥಿಗಳು ರಾಜಕೀಯ ಚಟುವಟಿಕೆಗಳಿಂದ ದೂರ ಉಳಿಯಲು ಸಾಧ್ಯವೇ ಮತ್ತು ಸಾಧುವೇ ಎಂಬುದನ್ನು ಗಮನಿಸಲು ಹೊರಟರೆ, ನಮ್ಮ ಚುನಾವಣಾ ರಾಜಕೀಯದ ಪರಿಧಿಯೊಳಗೆ ಮತದಾರರ ರೂಪದಲ್ಲಿ ನಿಂತಿರುವ ವಿದ್ಯಾರ್ಥಿಗಳು ತಮ್ಮದೇ ಆದ ರಾಜಕೀಯ ಒಲವು ಬೆಳೆಸಿಕೊಳ್ಳುವುದು, ನಿಲುವು ತಾಳುವುದು ಸ್ವಾಭಾವಿಕವೆಂಬಂತೆಯೇ ತೋರುತ್ತದೆ.

ಮತದಾರರ ರೂಪದಲ್ಲಿ ನಮ್ಮ ರಾಜಕೀಯ ವ್ಯವಸ್ಥೆಯ ಬೇರುಗಳಾಗಿ ನಿಂತಿರುವವರನ್ನು, 'ನಿಮಗೆ ರಾಜಕೀಯದ ಉಸಾಬರಿ ಏಕೆ? ಓದುವುದರತ್ತ ಮಾತ್ರ ಗಮನಹರಿಸಿ' ಎಂದು ಬಲಪ್ರಯೋಗ ಮಾಡಿ ನೆಲದ ಮೇಲೆ ಉರುಳಿಸುವುದು ಸಮಂಜಸವೇ? ಅಷ್ಟಕ್ಕೂ ಅವರು ಓದಬೇಕಿರುವುದಾದರೂ ಏಕೆ? ಕೇವಲ ಹೊಟ್ಟೆಪಾಡಿಗಾಗಿಯೇ? ವಿದ್ಯಾವಂತ ಸಮೂಹ ಈ ವ್ಯವಸ್ಥೆಯೊಂದಿಗೆ ಒಡನಾಟ ಬೆಳೆಸಿಕೊಳ್ಳುವ ಅಗತ್ಯತೆ ಇಲ್ಲವೇ?

ಆಳುವವರು ಇಡುವ ಹೆಜ್ಜೆಗಳಿಂದ ಶುರುವಾಗುವ ವ್ಯವಸ್ಥೆಯನ್ನು ಸುಧಾರಿಸುವ ಅಥವಾ ಹದಗೆಡಿಸುವ ಸರಪಳಿಯಲ್ಲಿ ವಿದ್ಯಾರ್ಥಿ ಸಮೂಹವೂ ಪ್ರಮುಖ ಕೊಂಡಿಯೇ ಅಲ್ಲವೇ? ತಾವು ಏನನ್ನು ಓದುತ್ತಿದ್ದೇವೆ, ನಮ್ಮ ಓದಿನಿಂದ ನಮಗೆ

ಮತ್ತು ಈ ಸಮಾಜಕ್ಕೆ ಏನು ದಕ್ಕುತ್ತದೆ ಅಂತೆಲ್ಲ ವಿದ್ಯಾರ್ಥಿಗಳು ಯೋಚಿಸಲೂ ಹೋಗಬಾರದೆ?

ಆಡಳಿತ ಮಂಡಳಿ ಅಥವಾ ಸರ್ಕಾರ ವಿಶ್ವವಿದ್ಯಾಲಯಗಳ ಆವರಣದಲ್ಲಿ ರಾಜಕೀಯ ಚಟುವಟಿಕೆಗಳಿಗೆ ಅವಕಾಶ ನೀಡುವುದಿಲ್ಲವೆಂದು ಸಾರಿದರೂ, ಹಲವು ಒಳದಾರಿಗಳ ಮೂಲಕ ಎಲ್ಲ ಬಗೆಯ ರಾಜಕೀಯವೂ ಒಳನುಸುಳುತ್ತದೆ.

ವಿದ್ಯಾರ್ಥಿಗಳು ಯಾವುದೋ ಒಂದು ರಾಜಕೀಯ ಪಕ್ಷದ ಕಾರ್ಯಕರ್ತರಂತೆ ವರ್ತಿಸದೆ ತಮ್ಮ ಅದುವರೆಗಿನ ಗ್ರಹಿಕೆಯ ಆಧಾರದಲ್ಲಿ ತಳೆಯುವ ರಾಜಕೀಯ ನಿಲುವುಗಳನ್ನು ಗೌರವಿಸಬೇಕಾದ್ದು ಎಲ್ಲರ ಜವಾಬ್ದಾರಿ. ವ್ಯಕ್ತಿ ಕೇಂದ್ರಿತ ಮನಸ್ಥಿತಿ ವಿಜೃಂಭಿಸುತ್ತಿರುವ ಹೊತ್ತಲ್ಲಿ ತಾವು ಜೀವಿಸುತ್ತಿರುವ ವ್ಯವಸ್ಥೆಯನ್ನು ಸುಧಾರಿಸುವ ನಿಟ್ಟಿನಲ್ಲಿ ಆಲೋಚಿಸುವ ವಿದ್ಯಾರ್ಥಿ ಸಮೂಹವನ್ನು ಯಾವುದೇ ವಿಶ್ವವಿದ್ಯಾಲಯ ರೂಪಿಸುತ್ತಿದ್ದರೂ ಅದು ಅಭಿನಂದನಾರ್ಹ. ಅಂತಹ ವಾತಾವರಣ ಇನ್ನಿತರ ವಿಶ್ವವಿದ್ಯಾಲಯಗಳಲ್ಲೂ ನೆಲೆಗೊಳ್ಳುವಂತಾಗಬೇಕೆಂದು ಅಪೇಕ್ಷಿಸುವುದು ಅಪರಾಧವಂತೂ ಅಲ್ಲ.

ಭಿನ್ನ ನಿಲುವುಗಳನ್ನು ಒಪ್ಪಿಕೊಳ್ಳಲು ಸಾಧ್ಯವಾಗದಿದ್ದರೂ ಕನಿಷ್ಠ ಪಕ್ಷ ಗೌರವಿಸುವ ಮೂಲಕ ಆರೋಗ್ಯಕರ ಚರ್ಚೆಯನ್ನು ಸದಾ ಕಾಲ ಚಾಲ್ತಿಯಲ್ಲಿಟ್ಟಿರುವುದು ಸಮಾಜದ ಆರೋಗ್ಯದ ದೃಷ್ಟಿಯಿಂದ ಅತ್ಯಗತ್ಯ. ಹಾಗಾಗಿ ಯಾವುದೇ ಪಂಥದ ವಿಚಾರಧಾರೆಯೇ ಆಗಿರಲಿ, ಅದನ್ನು ಒಪ್ಪುವ ಅಥವಾ ತಿರಸ್ಕರಿಸುವ ಸ್ವಾತಂತ್ರ್ಯ ಎಲ್ಲರಿಗೂ ಇದೆ, ವಿದ್ಯಾರ್ಥಿಗಳಿಗೂ. ತನ್ನ ರಾಜಕೀಯ ಕಾರ್ಯಸೂಚಿಯ ಭಾಗವಾಗಿ ಭಿನ್ನ ನಿಲುವು ಮತ್ತು ವಿಚಾರಧಾರೆಯ ದಮನಕ್ಕಾಗಿ ಇನ್ನಿಲ್ಲದ

ಕಸರತ್ತು ನಡೆಸುವ ಆಳುವವರ ವಿರುದ್ಧ ದನಿ ಎತ್ತುವ ಹಕ್ಕು ವಿಶ್ವವಿದ್ಯಾಲಯಗಳಲ್ಲಿ ಓದುವ ವಿದ್ಯಾರ್ಥಿಗಳಿಂದಿಡಿದು ಎಲ್ಲರಿಗೂ ಇದೆ.

ನಮ್ಮನ್ನು ಆಳುವವರು ಅನುಸರಿಸುವ ನೀತಿಗಳು, ವಿದ್ಯಾರ್ಥಿಗಳನ್ನೂ ಒಳಗೊಂಡಂತೆ ಎಲ್ಲರ ಮೇಲೂ ನೇರ ಪರಿಣಾಮ ಬೀರುವುದರಿಂದ ವಿಶ್ವವಿದ್ಯಾಲಯಗಳ ಆವರಣದಲ್ಲೂ ಸರ್ಕಾರದ ತಪ್ಪು ನಡೆಗಳನ್ನು ವಿಮರ್ಶಿಸುವ ವಿದ್ಯಾರ್ಥಿ ಸಮೂಹ ಸೃಷ್ಟಿಯಾಗುವುದು ಸ್ವಾಗತಾರ್ಹ ಮತ್ತು ಸದಾ ಕಾಲ ಜರುಗಲೇಬೇಕಿರುವ ಬೆಳವಣಿಗೆ.

ಓದಿ ಒಂದೊಳ್ಳೆ ನೌಕರಿ ಗಿಟ್ಟಿಸಿಕೊಂಡು ತಮ್ಮ ಪಾಡಿಗೆ ತಾವು ಇದ್ದುಬಿಡೋಣವೆಂದುಕೊಳ್ಳುವ ಆರಾಮ ಜೀವಿಗಳನ್ನಷ್ಟೆ ರೂಪಿಸುವ ಹೊಣೆಗಾರಿಕೆ ನಮ್ಮ ವಿಶ್ವವಿದ್ಯಾಲಯಗಳ ಮೇಲೆ ಇರಬೇಕೆಂದು ಅಪೇಕ್ಷಿಸುವುದು ಸ್ವೀಕಾರಾರ್ಹವೇ?

ರಾಜಕೀಯ ಒಲವು-ನಿಲುವುಗಳ ಹೊರತಾಗಿಯೂ ವಿದ್ಯಾರ್ಥಿಗಳು ಎದುರಿಸುವ ಸಮಸ್ಯೆಗಳನ್ನು ಆಳುವವರ ಗಮನಕ್ಕೆ ತರುವ ಸಲುವಾಗಿ ಕೆಲ ವಿದ್ಯಾರ್ಥಿ ಸಂಘಟನೆಗಳು ನಡೆಸಿಕೊಂಡು ಬರುತ್ತಿರುವ ವಿದ್ಯಾರ್ಥಿ ಕೇಂದ್ರಿತ ಹೋರಾಟಗಳ ಕುರಿತು ನಮ್ಮಲ್ಲಿ ಮೆಚ್ಚುಗೆ ಇದೆ. ಇದೇ ವೇಳೆ ವಿದ್ಯಾರ್ಥಿಗಳ ಸಮಸ್ಯೆಗಳನ್ನು ಕಡೆಗಣಿಸಿ ತಾವು ಬೆಂಬಲಿಸುವ ರಾಜಕೀಯ ಪಕ್ಷದ ಹಿತ ಕಾಯುವ ಸಲುವಾಗಿ ಮಾತ್ರ ಹೋರಾಡುವ ವಿದ್ಯಾರ್ಥಿ ಸಂಘಟನೆಗಳ ಬಗೆಗೆ ಬೇಸರವೂ ಇದೆ.

ಆದರೂ, ತಮ್ಮದೇ ಇತಿ ಮಿತಿಯಲ್ಲಿ ವಿದ್ಯಾರ್ಥಿಗಳಲ್ಲಿ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆ ಬಿತ್ತಲು ಒಂದಿಷ್ಟಾದರೂ ಯತ್ನಿಸುತ್ತಿರುವ ಸಂಘಟನೆಗಳ

ಚಟುವಟಿಕೆಗಳಿಗೆ ನಿರ್ಬಂಧ ಹೇರುವುದರಿಂದ ನಾವು ಸಾಧಿಸುವುದಾದರೂ ಏನನ್ನು ಎಂದು ಪ್ರಶ್ನಿಸಿಕೊಳ್ಳಬೇಕಿದೆ.

(ಅಕ್ಟೋಬರ್ 2016, ಪ್ರಜಾವಾಣಿ)



## ಬದುಕಲು ಧರ್ಮ ಬೇಕೆ?

'ಯಾವುದೇ ಧರ್ಮ ಸಾರುವುದು ಶಾಂತಿ ಸಂದೇಶವನ್ನೇ', 'ಎಲ್ಲ ಧರ್ಮಗಳೂ ಬೋಧಿಸುವುದು ಮಾನವೀಯತೆಯನ್ನೇ'... ಈ ಮಾತುಗಳು ಕಿವಿಗೆ ಬಿದ್ದಾಗಲೆಲ್ಲ, ಮನುಷ್ಯ ಈ ಧರ್ಮಗಳನ್ನು ಅಪ್ಪಿಕೊಳ್ಳದೇ ಬದುಕಲಾರನೇ ಎಂಬ ಪ್ರಶ್ನೆಯೂ ಎದುರಾಗುತ್ತದೆ. ಯಾವುದೇ ಧರ್ಮಗ್ರಂಥ ಓದಿರದ ಮತ್ತು ಓದುವ ಆಸಕ್ತಿಯನ್ನೂ ಹೊಂದಿರದ ನನಗೆ, ಧರ್ಮದ ಕಾರಣಕ್ಕಾಗಿಯೇ ಜರುಗುವ ಹಿಂಸಾಚಾರ ಮತ್ತು ಸಂಘರ್ಷಗಳನ್ನು ಕಂಡಾಗಲೆಲ್ಲ ಈ ಧರ್ಮಗಳ ಮೂಲದಲ್ಲೇ ಸಮಸ್ಯೆ ಇರಬಹುದೇನೊ ಎಂಬ ಅನುಮಾನ ಕಾಡಲಾರಂಭಿಸುತ್ತದೆ. 'ತಪ್ಪು ಧರ್ಮದ್ದಲ್ಲ, ಅದರ ಅನುಯಾಯಿಗಳದ್ದು' ಎನ್ನುವ ಸಮರ್ಥನೆ ಕೂಡ ಕ್ಲೀಷೆ ಎನಿಸುತ್ತದೆ.

ನಮ್ಮೊಳಗಿನ ಮಾನಸಿಕ ಹಾಗು ದೈಹಿಕ ಬೆಳವಣಿಗೆಗಳನ್ನು ಗಮನಿಸಿ ಹೇಳುವುದಾದರೂ, 'ಬದಲಾವಣೆ'ಯೊಂದೇ ಅಂತಿಮ ಸತ್ಯವೆಂಬುದು ವಾಸ್ತವಕ್ಕೆ ಹತ್ತಿರವೆನಿಸುತ್ತದೆ. ನಮ್ಮದೇ ಆಲೋಚನೆಗಳು ದಿನ ಕಳೆದಂತೆ ಬದಲಾಗುವಾಗ ಅಥವಾ ಅಪ್ಡೇಟ್ ಆಗುವಾಗ, ಎಷ್ಟೋ ವರ್ಷಗಳ ಹಿಂದೆ ಯಾರೋ ಬರೆದದ್ದನ್ನು ಅಥವಾ ಬೋಧಿಸಿದ್ದನ್ನೇ ಅಂತಿಮ ಸತ್ಯವೆಂದು ಭಾವಿಸಿ, ಆ ಪುರಾತನ ಚಿಂತನೆಯನ್ನೇ ವರ್ತಮಾನದಲ್ಲೂ ಪ್ರಚಲಿತಗೊಳಿಸುವುದರಲ್ಲಿ ಅರ್ಥವಿದೆಯೇ? ಧರ್ಮವೂ ಮತ್ತದು ಬಿತ್ತುವ ಆಲೋಚನಾ ಕ್ರಮವೂ ಬದಲಾವಣೆಗೆ ಒಳಪಡಬಾರದೇ?

'ದೇವರು ಮತ್ತು ಧರ್ಮ ಅವರವರ ವೈಯಕ್ತಿಕ ನೆಲೆಗಳಲ್ಲಿ ಅಸ್ತಿತ್ವ ಪಡೆದುಕೊಂಡರೆ ಸಮಸ್ಯೆಯಿಲ್ಲ'ವೆಂದು ನಂಬಿದ್ದೇವೆ. ಆದರೆ ಅದು ವಾಸ್ತವದಲ್ಲಿ ಕಾರ್ಯರೂಪಕ್ಕೆ ಬರುವ ಪರಿಸ್ಥಿತಿ ಇದೆಯೇ?

ವೈಯಕ್ತಿಕ ಹಿತಾಸಕ್ತಿಗಳು ಸಾರ್ವಜನಿಕವಾಗಿ ವಿಜೃಂಭಿಸುವಾಗ, ಧರ್ಮ ಮತ್ತು ದೇವರು ನಾಲ್ಕು ಗೋಡೆಗಳಿಗೆ ಸೀಮಿತವಾಗಿ ಉಳಿಯಲಾದರೂ ಹೇಗೆ ಸಾಧ್ಯ? 'ಧರ್ಮ'ವನ್ನೇ ನೆಚ್ಚಿಕೊಂಡು ರಾಜಕೀಯದಲ್ಲಿ, ಸಾರ್ವಜನಿಕ ವಲಯಗಳಲ್ಲಿ ಮೇಲೇರಿದವರು ಮತ್ತದನ್ನು ಗಮನಿಸಿ ತಾವೂ ಅದೇ ಹಾದಿ ಹಿಡಿಯುವುದು ಸೂಕ್ತವೆಂಬ ನಿರ್ಧಾರಕ್ಕೆ ಬಂದವರು ಧರ್ಮಗಳನ್ನು ಅವುಗಳ ಪಾಡಿಗಿರಲು ಬಿಡಲು ಸಿದ್ಧರಿದ್ದಾರೆಯೇ?

'ಧರ್ಮ'ವೂ ವೋಟ್ ಬ್ಯಾಂಕಿನ ರಾಜಕೀಯ ಅಕೌಂಟಿನಲ್ಲಿ ಫಿಕ್ಸೆಡ್ ಡೆಪಾಸಿಟ್ ಆಗುತ್ತಿರುವಾಗ, ದುರುಪಯೋಗವಾಗದಿರುವುದೇ?

ಮಾನವ ಕುಲಕ್ಕೆ ಒಳಿತನ್ನೇ ಬೋಧಿಸಿಯೂ(?) ಸಾವಿರಾರು ಜನರ ಮಾರಣಹೋಮಕ್ಕೆ ಮುನ್ನುಡಿ ಬರೆಯುತ್ತಿರುವ ಧರ್ಮಗಳಿಂದ ಹೊರ ಬಂದು ವರ್ತಮಾನಕ್ಕೆ ಸರಿ ಹೊಂದುವಂತಹ 'ಮನುಷ್ಯ ಧರ್ಮ'ವೊಂದನ್ನು ಸ್ಥಾಪಿಸುವ ಜರೂರತ್ತಾದರೂ ಇಲ್ಲವೇ? ಎಲ್ಲರೂ ತಮಗೆ ನೆಮ್ಮದಿ ಕರುಣಿಸಬಹುದಾದ ಧರ್ಮವನ್ನು ಅವರೊಳಗೆ ಅವರೇ ಕಂಡುಕೊಳ್ಳುವ ಸಾಧ್ಯತೆಯೂ ಇದೆ ಅಲ್ಲವೇ?

(ನವೆಂಬರ್ 2015, ಕನ್ನಡಪ್ರಭ)



## ಸೂಚನೆ

‘ಗೋಡೆಗಳ ನಡುವೆ...’ ಇ-ಪುಸ್ತಕವಾಗಿ ಮಾತ್ರ ದೊರೆಯಲಿದೆ. ಇದರ ಮುದ್ರಿತ ಪ್ರತಿಗಳು ಲಭ್ಯವಿರುವುದಿಲ್ಲ. ಪುಸ್ತಕ ನಿಮಗೆ ಮೆಚ್ಚುಗೆಯಾದಲ್ಲಿ ಅಥವಾ ಇದು ಓದಲು ಅರ್ಹವೆನಿಸಿದಲ್ಲಿ ಪುಸ್ತಕದ ಪಿಡಿಎಫ್ ಪ್ರತಿಯನ್ನು ನೀವು ಯಾರೊಂದಿಗಾದರೂ ಹಂಚಿಕೊಳ್ಳಬಹುದು. ಪುಸ್ತಕವನ್ನು ಉಚಿತವಾಗಿ ಆದರೂ ಓದಬಹುದು ಅಥವಾ ಕೆಳಗಿನ ಲಿಂಕ್ ಮೂಲಕ ₹ 30 ಪಾವತಿಸಿ ಮತ್ತಷ್ಟು ಇ-ಪುಸ್ತಕಗಳನ್ನು ಹೊರತರಲು ಬಯಸಿರುವ ಪ್ರಜೋದಯ ಪ್ರಕಾಶನವನ್ನು ಬೆಂಬಲಿಸಬಹುದು.

## ಹಣ ಪಾವತಿಸಲು ಈ ಲಿಂಕ್ ಬಳಸಿ

www.payumoney.com/store/buy/prajodayaprakashana

## ಪ್ರಜೋದಯ ಪ್ರಕಾಶನದ ಪುಸ್ತಕಗಳು

**ಮೊದಲ ತೊದಲು (ಲೇಖನಗಳು)** ಶರತ್ ಎಚ್.ಕೆ. ಬೆಲೆ: ₹ 80

**ಕರಗದ ನಗು (ಕತೆಗಳು)** ಕಾವೇರಿ ಎಸ್.ಎಸ್. ಬೆಲೆ: ₹ 65

**ಸೋಲು ಗೆದ್ದವನದ್ದು! (ಕಾದಂಬರಿ)** ಮಂಜು ಬನವಾಸೆ ಬೆಲೆ: ₹ 150

**ಬೆಳಕಿನ ಬೇಲಿ (ನ್ಯಾನೋ ಕತೆಗಳು)** ಶರತ್ ಎಚ್.ಕೆ. ಬೆಲೆ: ₹ 60

* **ಗೋಡೆಗಳ ನಡುವೆ... (ಲೇಖನಗಳು)** ಶರತ್ ಎಚ್.ಕೆ. ಬೆಲೆ: ₹ 30

* ಇ-ಪುಸ್ತಕ: ಮುದ್ರಿತ ಪ್ರತಿ ಲಭ್ಯವಿರುವುದಿಲ್ಲ

### ವಿಳಾಸ:

**ಪ್ರಜೋದಯ ಪ್ರಕಾಶನ,** ಗಂಧದ ಕೋಠಿ ಹಿಂಭಾಗ, ಗೋಕುಲ್ ಹೋಟೆಲ್ ರಸ್ತೆ, ಕೆ.ಆರ್.ಪುರಂ, ಹಾಸನ-573201

✉: prajodayaprakashana@gmail.com
☎: 8792276742

www.facebook.com/prajodayaprakashana

### ಆನ್ ಲೈನ್ ಅಂಗಡಿ

www.payumoney.com/store/buy/prajodayaprakashana

